**ಕೊಂಡು ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳು** ಸ್ವಲ್ಪಕಾಲ ಮಂಡಯದಲ್ಲಿಯೇ ವಾಸವಾಗಿದ್ದರು. ಆಳ್ವಾರ್ ತಿರುನಗರಿ ಪ್ರಾಂತದಲ್ಲೂ ಕೆಲಕಾಲ ವಾಸಿಸಿದರು. ಇವರೂ ಭಾರದ್ವಾಜ ಗೋತ್ರದವರು. ಶ್ರೀ|| ಉ|| ಅನಂತಾಳ್ವಾರ್ ಸ್ವಾಮಿಗಳವರ ವಂಶೀಯರು.

ಮಂಡಯದಿಂದ ಶ್ರೀರಂಗಕ್ಕೆ ದಯಮಾಡಿಸಿ ಶ್ರೀ|| ಉ|| ಕೋವಿಲ್ ಕನ್ನಾಡೈಯಣ್ಣನವರ ವಂಶಸ್ಥರಲ್ಲಿ ಸಮಾಶ್ರಯಣವನ್ನು ಹೊಂದಿದರು. ಶ್ರೀ|| ಉ|| ಕೋವಿಲ್ ಕನ್ನಾಡೈಯಣ್ಣನವರು ಶ್ರೀ ಮಣವಾಳಮಾಮುನಿಗಳ ಶಿಷ್ಯರೆಂಬುದು ಸರ್ವವಿದಿತವಾಗಿದೆ. ಅನಂತರ ಕಾಂಚೀಪುರದಲ್ಲಿ ಕೆಲ ಕಾಲ ವಾಸಮಾಡಿ ಪುನಃ ಮಂಡಯಕ್ಕೆ ದಯಮಾಡಿಸಿದರು.

ಕಾಂಚೀಪುರದಲ್ಲಿ ಹುಟ್ಟಿದ ಇವರ ಮೊದಲನೆಯ ಕುಮಾರರಿಗೆ '**ವರದಾಚಾರ್ಯ**' ರೆಂದು ಹೆಸರಿಟ್ಟರು. ಮಂಡಯಕ್ಕೆ ಹಿಂತಿರುಗಿದ ಅನಂತರ ಮತ್ತೊಬ್ಬ ಕುಮಾರರು ಜನಿಸಿದರು. ಇವರಿಗೆ '**ಗೋವಿಂದರಾಜ**' ರೆಂದು ಹೆಸರಿಟ್ಟರು. ಶ್ರೀ|| ಉ|| ತಿರುಮಲೈ ಗೋವಿಂದರಾಜ ಉಡೈಯವರಿಂದ ತಮಗೆ ಆದ ಸಹಾಯವನ್ನು ಸ್ಮರಿಸಿ ಕೃತಜ್ಞತೆಯಿಂದ ತಮ್ಮ ಎರಡನೆಯ ಕುಮಾರರಿಗೆ ಗೋವಿಂದರಾಜರೆಂದು ನಾಮಕರಣಮಾಡಿರಬೇಕು.

ಮೊದಲನೆಯ ಕುಮಾರರಾದ ವರದಾಚಾರ್ಯರ ಜ್ಯೇಷ್ಠಪುತ್ರರೇ ಶ್ರೀ|| **ಉ|| ಅಪ್ಪಯಾಚಾರ್ಯ ಸ್ವಾಮಿಗಳು** (ಶ್ರೀನಿವಾಸಾಚಾರ್ಯರು) ಎಂಬ ಮಹಾತ್ಮರು. ಇವರು ತಮ್ಮ ಚಿಕ್ಕಪ್ಪಂದಿರಾದ ಶ್ರೀ|| ಉ|| ಗೋವಿಂದಾಚಾರ್ಯರಲ್ಲಿ ಚಕ್ರಾಂಕನಾದಿಗಳನ್ನು ಮಾಡಿಸಿಕೊಂಡರು. **ಶ್ರೀ|| ಉ|| ವೇದಾನ್ತಿ ರಾಮಾನುಜಸ್ವಾಮಿಗಳವರು** ಇವರ ವಿದ್ಯಾಗುರುಗಳು. ಶ್ರೀ|| ಉ|| ಅಪ್ಪಯ್ಯಾಚಾರ್ಯ ಮಹಾತ್ಮರು ವಿಜಯನಗರಾಧಿಪತಿ ಸದಾಶಿವ ರಾಯನಿಂದ ಕ್ರಿ. ಶ. ೧೫೫೮ ನೆಯ ಇಸವಿಯಲ್ಲಿ ಚನ್ನಪಟ್ಟಣ ತಾಲ್ಲೂಕು ಮಳೂರು ಹೋಬಳಿ 'ಮಾಚೇನಹಳ್ಳಿ' ಎಂಬ ಗ್ರಾಮವನ್ನು ದಾನವಾಗಿ ಪಡೆದರು. ಇದು ಚನ್ನಪಟ್ಣದ ೧೫೬ ನೇ ನಂಬರು ಶಾಸನದಲ್ಲಿ ವ್ಯಕ್ತವಾಗಿದೆ. ಈ ಶಾಸನದ ನಕಲನ್ನು ಈ ಲೇಖನದ ಬೇರೊಂದು ಪ್ರಕರಣದಲ್ಲಿ ಬರೆದಿದೆ.

ಈ ಮಾಜೀನಹಳ್ಳಿಗೆ 'ರಾಮಾನುಜಪುರ' ಎಂದು ನಾಮಧೇಯವನ್ನು ಕೊಟ್ಟು ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳವರು ಅಲ್ಲಿಯೇ ತಮ್ಮ ಬಂಧುಗಳೊಡನೆ ವಾಸಮಾಡಿಕೊಂಡು ಉಭಯವೇದಾನ್ತ ಕಾಲಕ್ಷೇಪ ನಿರತರಾಗಿದ್ದರು. ಈ ಮಹನೀಯರ ವಂಶದವರೆಲ್ಲಾ **'ರಾಮಾನುಜಪುರಂ ಅನಂದಾಣ್ ಪಿಳ್ಳೈಗಳ್'** ಎಂದು ಕರೆಯಲ್ಪಡುತ್ತಾರೆ. ಶ್ರೀ|| ಉ|| ಅಪ್ಪಯಾಚಾರ್ಯರು 'ಅಷ್ಟಶ್ಲೋಕಿಯ' ಮೇಲೆ 'ಆರಾಯಿರಪ್ಪಡಿ' ವ್ಯಾಖ್ಯಾನವನ್ನು ರಚಿಸಿರುವರು.

ಮಂಡಯಂ ಅನಂದಾಣ್ ಪಿಳ್ಳೈಗಳಿಗೂ ರಾಮಾನುಜಪುರಂ ಅನಂದಾಣ್ ಪಿಳ್ಳೈಗಳಿಗೂ ಹಿಂದಿನಿಂದಲೂ ಸಂಬಂಧವಿದ್ದಿತೆಂದೇ ಹೇಳಬೇಕಾಗಿದೆ.

ಈ ರಾಮಾನುಜಪುರದ ಸ್ವಾಮಿಗಳವರ ತನಿಯನ್‌ಗಳನ್ನು ಇಲ್ಲಿ ಬರೆದಿವೆ:

1. ಶ್ರೀ|| ಉ|| ಕುನ್ರಪಾಕ್ಕಂ ಅಪ್ಪಯಾಚಾರ್ಯಸ್ವಾಮಿಗಳ (ವೆಂಕಟಾಚಾರ್ಯರ್) ತನಿಯನ್—

ವಾಧೂಲವರದಾಚಾರ್ಯ ಕೃಪಾಪಾತ್ರ ಮಕಲ್ಮಷಂ |
ಶೇಷಾರ್ಯ ಕುಲಜೀವಾತುಂ ವೆಂಕಟಾಚಾರ್ಯಮಾಶ್ರಯೇ ||

2. ಇವರ ಮಕ್ಕಳು ಶ್ರೀ||ಉ|| ವರದಾಚಾರ್ಯಸ್ವಾಮಿಗಳ ತನಿಯನ್-

ವೇಂಕಟಾಚಾರ್ಯ ತನಯಂ ತತ್ಪಾದಾಂಭೋಜಷಟ್ಪದಮ್ |
ಅನಂತಾರ್ಯ ಕುಲಾಬ್ಧೀಂದುಂ ವರದಾರ್ಯ ಮಹಂ ಭಜೇ ||

3. ಇನೇಯವರ ತಮ್ಮಂದಿರು ಶ್ರೀ|| ಉ|| ಗೋವಿಂದರಾಜ ಸ್ವಾಮಿಗಳ ತನಿಯನ್—

ಅನಂತಾರ್ಯ ಕುಲಾಕಲ್ಪಂ ವೇಂಕಟಾರ್ಯ(ಅಪ್ಪಯಾರ್ಯ) ತನೂಭವಂ |
ವರದಾರ್ಯ ಕೃಪಾಪಾತ್ರಂ ಗೋವಿಂದ ಗುರುಮಾಶ್ರಯೇ ||

4. ಇನೇಯವರ ಮಕ್ಕಳು ಎಂದರ ಶ್ರೀ|| ಉ|| ವರದಾಚಾರ್ಯರ ಕುಮಾರರು ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳವರ (ಶ್ರೀನಿವಾಸಾಚಾರ್ಯರ) ತನಿಯನ್ (ರಾಮಾನುಜಪುರ ಪ್ರತಿಷ್ಠಾಪಕರು)—

ಶೇಷಾರ್ಯ ವಂಶಾಂಬುಧಿ ಪೂರ್ಣಚಂದ್ರಂ |
ಗೋವಿಂದರಾಜಾರ್ಯ ದಯೈಕಪಾತ್ರಂ ||
ವೇದಾಂತಿ ರಾಮಾನುಜ ಲಬ್ಧಬೋಧಂ |
ಶ್ರೀ ಶ್ರೀನಿವಾಸಾರ್ಯಮಹಂ ಪ್ರಪದ್ಯೆ ||
ಚಕಾರ ಭಟ್ಟೋಪಪದಾರ್ಯಸೂಕ್ತ |
ಶ್ಲೋಕಾಷ್ಟಕ ವ್ಯಾಕೃತಿ ಮಾರ್ಯಸೇವ್ಯಾಮ್ ||
ಯಸ್ತಂ ಫಣೀಂದ್ರಾರ್ಯ ಕುಲಾವತಂಸಂ |
ಶ್ರೀ ಶ್ರೀನಿವಾಸಾರ್ಯ ಮಹಂ ಪ್ರಪದ್ಯೇ ||

ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳವರಿಂದ ಇಂದಿನವರೆಗೆ ರಾಮಾನುಜಪುರದ ಮಹನೀಯರ ವಂಶವೃಕ್ಷವು ಬೇರೆ ಪ್ರಕರಣದಲ್ಲಿ ಬರೆಯಲ್ಪಟ್ಟಿದೆ.

ರಾಮಾನುಜಪುರದ ಪ್ರತಿಷ್ಠಾಪಕರಾದ ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳು ಶ್ರೀಯದುಗಿರಿ ಯತಿರಾಜ ಮಠದ **ಶ್ರೀ|| ಉ|| ವೇದಾಂತಿ ರಾಮಾನುಜ ಜೀಯರ್ ಸ್ವಾಮಿಗಳವರಲ್ಲಿ** ವಿದ್ಯಾರ್ಜನೆಯನ್ನು ಮಾಡಿದರೆಂದು ಹಿಂದೆಯೇ ತಿಳಿಸಿದೆ. ಶ್ರೀ|| ಉ|| ಅಪ್ಪಯಾಚಾರ್ಯರು ತಾವು ಈ ಪ್ರಾಂತಕ್ಕೆ ಬಂದಾಗ ತಮ್ಮೊಡನೆ ತಮ್ಮ ವಿದ್ಯಾಗುರುಗಳಾದ ಶ್ರೀ|| ಉ|| ವೇದಾಂತಿ ರಾಮಾನುಜರನ್ನು ಕರೆತಂದರೆಂದು ಪರಂಪರಾಗತವಾಗಿ ತಿಳಿದು ಬಂದಿದೆ.

ಈ ಸ್ವಾಮಿಗಳು ರಾಮಾನುಜಪುರದ ಲೋಹಿತ ಗೋತ್ರದವರಿಗೆಲ್ಲಾ ಮೂಲಪುರುಷರು. ಇವರ ಮಕ್ಕಳಲ್ಲೊಬ್ಬರಾದ ಶ್ರೀ|| ಉ|| ವೆಂಕಟಾಚಾರ್ಯರವರು ಈಗಿನ ಆಜಿವಂಶದವರಿಗೆಲ್ಲಾ ಮೂಲಪುರುಷರು. ಈಚೆಗೆ ಆಜಿಯುವರು ಮಂಡಯದ ಆಜಿ, ಮೈಸೂರು ಆಜಿ ಮತ್ತು ಮಳೂರು ಆಜಿಯವರೆಂದು ಮೂರು ಗುಂಪಾದರು.

ಶ್ರೀ|| ಉ|| ವೇದಾಂತಿ ರಾಮಾನುಜರ ಇನ್ನೊಬ್ಬ ಕುಮಾರರು ಈಗಿನ ಅಪ್ಪಚ್ಚಾರ್ ವಂಶಕ್ಕೆ ಮೂಲಪುರುಷರು. ಕರೀಘಟ್ಟದವರೂ, ಛತ್ರಪತಿಯವರೂ ಸಹ ಶ್ರೀ|| ಉ|| ವೇದಾಂತಿ ರಾಮಾನುಜರ ವಂಶಸ್ಥರು.

ರಾಮಾನುಜಪುರದ ಪ್ರತಿಷ್ಠಾಪಕರಾದ ಶ್ರೀ|| ಉ|| ಶ್ರೀನಿವಾಸಾಚಾರ್ಯರವರು ಮಹಾತ್ಮರು, ಬಹುಶೀಲರು, ಘನಪಂಡಿತರು. ಆದುದರಿಂದಲೇ ಇವರ ವಿದ್ಯಾಗುರುಗಳ ಪುತ್ರರಾದ ಆಜಿಯವರ ಮೂಲಪುರುಷರು. ಶ್ರೀ|| ಉ|| ವೆಂಕಟಾಚಾರ್ಯರವರು ಶ್ರೀ|| ಉ|| ಶ್ರೀನಿವಾಸಾಚಾರ್ಯರವರಿಂದಲೇ ಪಂಚಸಂಸ್ಕಾರವನ್ನು ಹೊಂದಿರಬೇಕು.

ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳವರು ಅಂಶಪುರುಷರು. ಮಂಡಯದ ಶ್ರೀ ವೈಷ್ಣವ ಮಹಾಜನರಿಂದ ಎಂದೆಂದಿಗೂ ಆರಾಧಿಸಲ್ಪಡತಕ್ಕವರು.

# ಪ್ರಕರಣ ೪

## ಮಂಡಯ ಮತ್ತು ರಾಮಾನುಜಪುರದವರ ವಿಸ್ತಾರ

ಮೇಲುಕೋಟೆಯಲ್ಲಿ (ತಿರುನಾರಾಯಣಪುರಂ) ಬಹಳ ಹಿಂದಿನಿಂದಲೇ ನಮ್ಮವರು ನೆಲಸಿದ್ದರು. ನಮ್ಮವರ ಆಚಾರವಂತೆಯೇ ಅನುಸರಿಸುತ್ತಿದ್ದ ಇತರ ಶ್ರೀ ವೈಷ್ಣವ ಮಹಾಜನಗಳೂ ಅಲ್ಲಿಯೇ ಇರುತ್ತಿದ್ದರು. ತಿರುನಾರಾಯಣಪುರದ ಸುತ್ತಮುತ್ತಲ ಗ್ರಾಮಗಳಾದ ನಾಗಮಂಗಲ, ಕುಣಿಗಲ್, ಪಾಮಸಮುದ್ರ, ಕ್ಯಾತನಹಳ್ಳಿ ಇತ್ಯಾದಿ ಗ್ರಾಮಗಳ ಶ್ರೀ ವೈಷ್ಣವ ಮಹಾಜನಗಳು ಮಂಡಯದವರು. ಈ ಶ್ರೀ ವೈಷ್ಣವರಲ್ಲೆಲ್ಲಾ ವಿವಾಹ ಸಂಬಂಧವನ್ನು ಆಗಿನಕಾಲಕ್ಕೆ ಬೆಳೆಯಿಸಲಿಲ್ಲವೆನ್ನುತ್ತಾರೆ. ಇದು ನಿರ್ಧರದ ಮಾತಾಗಿ ದೃಢೀಕರಿಸಲಾಗುವುದಿಲ್ಲವೆಂದು ಕಾಣುತ್ತದೆ. ಆದರೆ ಚಿಕ್ಕದೇವರಾಜ ಒಡೆಯರವರ (ಕ್ರಿ. ಶ. ೧೬೭೩–೧೭೦೪) ಮಂತ್ರಿ ಶ್ರೀ|| ಉ|| ತಿರುಮಲೈಯ್ಯಂಗಾರ್ಯರು (ಶ್ರೀ|| ಉ|| ಗೋವಿಂದರಾಜ ಉಡೈಯರವರ ವಂಶಸ್ಥರು. ಪ್ರಧಾನ್ ಅಪ್ಪಾಜಯ್ಯ ಅಥವಾ ಗೋವಿಂದರಾಜಯ್ಯನವರ ಮಗಳ ಮಗ; ಪ್ರಧಾನ ವಂಶವೃಕ್ಷದಲ್ಲಿ ಬೇರೆ ಪ್ರಕರಣದಲ್ಲಿ ನಿರೂಪಿಸಿದೆ.) ಈ ಸಮುದಾಯದ ಸಂಕುಚಿತ ಭಾವವನ್ನು ಹೋಗಲಾಡಿಸಿ, ಅದನ್ನು ವಿಸ್ತರಿಸಲು ಏಕ ಕಾಲದಲ್ಲಿ ಐದು ಹೆಂಡಿರನ್ನು ಮದುವೆಯಾದರೆಂದು ಸಾಂಪ್ರದಾಯಿಕ

ವರ್ತಮಾನವು ನೆಲಸಿದೆ—ಮಂಡಯ, ರಾಮಾನುಜಪುರ, ಕುಣಿಗಲ್, ನಾಗಮಂಗಲ ಮತ್ತು ಕ್ಯಾತನಹಳ್ಳಿಯ ಶ್ರೀ ವೈಷ್ಣವ ಹೆಂಗಸರು.

ಹೀಗೆ ವಿಶಾಲವಾದ ಸಮುದಾಯದವರು ಮಂಡಯ, ಮೈಸೂರು ಮದ್ರಾಸು, ಶ್ರೀರಂಗಪಟ್ಟಣ, ರಾಮಾನುಜಪುರ, ಮಂಡಯದ ಕೊಪ್ಪಲು, ಮಳೂರು, ಹೊನ್ನಲಗೆರೆ, ಬೆಂಗಳೂರು ಮುಂತಾದ ಊರುಗಳಲ್ಲೆಲ್ಲಾ ವಾಸಮಾಡುತ್ತಿರುವರು. ಇನ್ನೂ ದೂರ ದೇಶಗಳಿಗೆ ಕೆಲವರು ಹೋಗಿ ನೆಲೆಸಿರುತ್ತಾರೆ.

'**ಪೆರಿಯಹಾಂ**' ಎಂದು ಪ್ರಸಿದ್ಧಿ ಪಡೆದಿರುವ ನಮ್ಮವರ ಮನೆಯು ತಿರುವಲ್ಲಿಕ್ಕೇಣಿಯಲ್ಲಿ ಈಸ್ಟ್ ಇಂಡಿಯಾ ಕಂಪೆನಿಯವರಿಂದ ಪ್ರಧಾನ ತಿರುಮಲರಾಯರಿಗೆ ಕೊಡಲ್ಪಟ್ಟಿತು. ಅವರ ವಂಶಸ್ಥರೂ ನಂಟರೂ ಮದ್ರಾಸಿನಲ್ಲಿಯೇ ನೆಲೆಸಿದರು.

ಕ್ರಿ. ಶ. ೧೭೯೯ ರಲ್ಲಿ ಹೈದರ್, ಟಿಪ್ಪೂ ಇವರುಗಳು ನಾಶವಾದಮೇಲೆ ಅವರುಗಳ ಕಾಲದಲ್ಲಿ ನಾನಾ ಹಿಂಸೆಗಳಿಗೆ ಗುರಿಯಾಗಿದ್ದ ನಮ್ಮ ಜನಗಳು ಸುರಕ್ಷಿತರಾಗಿ ಮತ್ತೆಮೈಸೂರುದೇಶಕ್ಕೆಹೋಗಿ ನಿಂತರು. ೧೮೩೧ ನೆಯ ಇಸವಿ ಯಿಂದೀಚೆಗೆ ಬೆಂಗಳೂರು ಸರಕಾರದ ಪ್ರಧಾನ ನಗರವಾದುದರಿಂದಲೂ, ವಿದ್ಯಾಭ್ಯಾಸ ಮುಂತಾದುವುಗಳಿಗೆ ಹೆಚ್ಚು ಸೌಕರ್ಯಗಳು ಏರ್ಪಟ್ಟಿದುದ ರಿಂದಲೂ, ಬೆಂಗಳೂರು ನಗರದಲ್ಲಿ ಈಗ ನಮ್ಮವರ ಮನೆಗಳು ಹೆಚ್ಚು ಸಂಖ್ಯೆಯಿಂದಿವೆ (೧೯೫೦ ರಲ್ಲಿ ಸುಮಾರು ೨೦೩ ಮನೆಗಳು).

ಕ್ರಿ. ಶ. ೧೮ ನೆಯ ಶತಮಾನದಲ್ಲಿ ಮಂಡಯದ ಕೊಪ್ಪಲಿನಲ್ಲಿ ನಮ್ಮವರ ಮನೆಗಳು ಸುಮಾರು ೨೪ ಇದ್ದುವಂತೆ. ಹೆಚ್ಚು ಸಂಖ್ಯೆಯವರು ರಾಮಾನುಜ ಪುರದ ಶಾಖೆಯವರು. ಈಗ ಕ್ರಿ. ಶ. ೧೯೫೦ ರಲ್ಲಿ ಎರಡು ಮೂರು ಮನೆ ಗಳು ಮಾತ್ರ ಇವೆ.

ಮಳೂರಿನಲ್ಲೂ ನಮ್ಮವರು ನೆಲೆಸಿದ್ದುದು ೧೮ ನೆಯ ಶತಮಾನದಲ್ಲೇ ಎಂದು ತಿಳಿದುಬರುತ್ತದೆ. ಇವರ ಸಂತತಿಯವರು ಮದರಾಸಿನ ನಾಯಕ ವಂಶಸ್ಥರು; ಶ್ರೀ ಅಪ್ರಮೇಯ ಸ್ವಾಮಿಯವರ ದೇವಸ್ಥಾನದ ಆಡಳಿತ

ಗಳನ್ನು ನೋಡಿಕೊಳ್ಳುತ್ತಿದ್ದವರೆಂದು ಪ್ರತೀತಿ ಇದೆ. ಇವರುಗಳಿಗೆ ಅಗ್ರಮಾನ್ಯವೆ ಇದ್ದಿತಂತೆ.

೧೨ ನೆಯ ಶತಮಾನದಲ್ಲಿ ಹೊನ್ನಲಗೆರೆಯು ರಾಮಾನುಜಪುರದವರಿಂದ ನಿರ್ಮಿತವಾಯಿತೆನ್ನಬಹುದು. ಈಗ ಕ್ರಿ. ಶ. ೧೯೫೦ ರಲ್ಲಿ ರಾಮಾನುಜಪುರದಲ್ಲಿ ನಮ್ಮವರ ಮನೆಯೇ ಇಲ್ಲವಿರುವುದೂ. ಹೊನ್ನಲಗೆರೆಯಲ್ಲಿ ಒಂದೇ ಒಂದು ಮನೆಯಿರುವುದೂ ಬಹಳ ವಿಷಾದವಾಗಿದೆ. ಇವೆರಡು ಗ್ರಾಮಗಳಲ್ಲೂ ಮಂಡಯಂ ಶ್ರೀ ವೈಷ್ಣವ ಮಹಾಜನರ ಬಹಳ ಗಣ್ಯರಾದ ಮಹನೀಯರು ನೆಲಸಿದ್ದರು.

ಶ್ರೀ ಎಸ್. ಜಿ. ನರಸಿಂಹಾಚಾರ್ಯರ ವಂಶಸ್ಥರು ಬೂದಿಹಾಳೆಂಬ ಗ್ರಾಮದವರೆಂದು ಶ್ರೀರಂಗಪಟ್ಟಣದ ಕ್ರಿ.ಶ. ೧೬೦೪ ನೆಯ ಇಸವಿಯ ಶಾಸನದಿಂದ ತಿಳಿದುಬರುತ್ತದೆ. ಇದಲ್ಲದೆ ಕನ್ನಂಬಾಡಿ, ಸಂಪಳ್ಳಿ, ಕೊತ್ತೇಗಾಲ ಇಲ್ಲಿಯವರೂ ಮಂಡಯದ ಸಮುದಾಯಕ್ಕೇ ಸೇರಿದವರು.

ಒಟ್ಟಿನಲ್ಲಿ ಈಗ (ಕ್ರಿ. ಶ. ೧೯೫೦ ರಲ್ಲಿ) ಸುಮಾರು ೧೪೦ ಮಂಡಯಂ ಶ್ರೀ ವೈಷ್ಣವ ಮಹಾಜನರ ಪ್ರಧಾನ ಕುಟುಂಬದವರು ಇರುವರು. ಅವರ ಗೋತ್ರಗಳ ವಿವರ, ಕುಟುಂಬದ ವಾಡಿಕೆಯಾದ ಹೆಸರುಗಳು ಮುಂದೆ ಬರೆದಿದೆ. ಇವು ಮನೆತನದ ಹೆಸರುಗಳು ಮಾತ್ರವಾಗಿವೆ. ಈ ೧೪೦ ಮನೆತನಗಳವರು ಸುಮಾರು ೭೦೦ ಕ್ಕೆ ಮೇಲ್ಪಟ್ಟು ಪ್ರತ್ಯೇಕ ಮಹಾಜನರ ಒಕ್ಕಲುತನವನ್ನು ಬೆಳಗಿಸುತ್ತಿದ್ದಾರೆ. ಪ್ರಜಾ ಸಂಖ್ಯೆ ಸುಮಾರು ೩೮೦೦ ಈ ಸುಮಾರು ೭೦೦ ಕುಟುಂಬಗಳ ಹೆಸರುಗಳನ್ನು ಈ ಪ್ರಕರಣದಲ್ಲಿ ಸೇರಿಸಿದೆ. ಕೆಲವು ಹೆಸರುಗಳು ಬಿಟ್ಟುಹೋಗಿವೆ. ಹೆಸರುಗಳನ್ನು ನಿರೂಪಿಸುವುದರಲ್ಲಿಯೂ ವ್ಯತ್ಯಾಸಗಳಿರಬಹುದು. ಕೆಲವು ಕುಟುಂಬಗಳು ಇರುವ ಸ್ಥಳಗಳು ಸಕಾಲಕ್ಕೆ ತಿಳಿಯಲಿಲ್ಲ. ಹೆಸರುಗಳೂ ತಿಳಿಯಲಿಲ್ಲ. ಇದಕ್ಕಾಗಿ ಲೇಖಕನು ಕ್ಷಮಾಪಣೆಯನ್ನು ಬೇಡುವುದಲ್ಲದೆ, ಇದನ್ನು ಮುಂದೆ ತಿದ್ದಿ ಸರಿಪಡಿಸುವ ಸುಯೋಗವನ್ನು ದಯೆಯಿಟ್ಟು ಕಲ್ಪಿಸಿಕೊಡಬೇಕೆಂದು ನಮ್ಮ ಮಹಾಜನರನ್ನು ವಿನಯದಿಂದ ಪ್ರಾರ್ಥಿಸುತ್ತಾನೆ.

**ಗೋತ್ರಗಳ ರೀತಿಯಾಗಿ ಮಂಡಯಂ ಸಮುದಾಯಕ್ಕೆ ಸೇರಿದ ಪ್ರಧಾನ ಕುಟುಂಬಗಳ ಹೆಸರುಗಳು—**

I. **ಭಾರದ್ವಾಜ ಗೋತ್ರ:**

ಆಂಗೀರಸ, ಬಾರ್ಹಸ್ಪತ್ಯ, ಭಾರದ್ವಾಜ ಋಷಿಗಳು.

ರಾಮಾನುಜಪುರಂ ಆಸಂಡಾಣ್ ಪಿಳ್ಳೈಗಳು.

1. ಅಯ್ಯಾಪಾಟರ್
2. ಅಣ್ಣಪಾಟರ್ (ಅರಕೆರೆಗಳು)
3. ಹೊನ್ನಲಗೆರೆ
4. ಮಣಿಕರ್ಣಿಕೆ
5. ಕುಟ್ಟೈತ್ತಂಬಿ
6. ಚಕ್ರಾಳ್ವಾರ್
7. ಅಣ್ಣಯ್ಯಪ್ಪನ್
8. ಕುಟ್ಟೆಯಪ್ಪಾಜಿ
9. ಅಮ್ಮಾಂಜಿ

II. **ಗಾರ್ಗ್ಯ ಭಾರದ್ವಾಜ ಗೋತ್ರ:**

(a) **ಸಾಮಶಾಖೆ–**

ಆಂಗೀರಸ, ಗಾರ್ಗ್ಯ, ಶೈಬ್ಯ ಋಷಿಗಳು.

1. ಗುಂಜಾ ಜೋಸ್ಯರ್.

(b) **ಯಜುಶ್ಶಾಖೆ–**

1. ಬಳ್ಳೇಕೆರೆ
2. ಮುದ್ರೆ
3. ಇಯಲ್ ಪಿಳ್ಳೈ
4. ವಜ್ರಕಂಠಂ
5. ರಾಮಾನುಜ ಮುನಿ
6. ಜೀಯರ್ ಸನ್ನಿಧಿ
7. ಕಂಚಿ ರಾಮಾನುಜರ್
8. ಗರಕಹಳ್ಳಿ

III. **ಮಂಡಯಂ ಭಾರದ್ವಾಜ:**

1. ತಾತಾಚಾರ್
2. ರಂಗಯ್ಯನ್
3. ಅಣ್ಣಾಥೊರೆ
4. ಪೆರಿಯ ತಿರುಜಾರಾಯಣಾಚಾರ್ಯರ್

5. ಮದರಾಸ್ ಪೆರಿಯಹಾತ್ ಶಿಂಗ್ಲಾಚಾರ್
6. ಮಳೂರು ಆನಂದಾಳ್ವಾರ್
7. ಭೀಮನ್ ವಂಶಸ್ಥರು
8. ಆನಂದಾಳ್ವಾರ್ ನರಸಿಂಹಾಚಾರ್ಯರು
9. ನಾಟಂಪಳ್ಳಿ ವಂಶಸ್ಥರು
10. ರಂಗಧಾಮನ್
11. ಚನ್ನು ವಂಶಸ್ಥರು
12. ಮಾದ್ರಿ ವಂಶಸ್ಥರು
1೩. ಚೊಕ್ಕಣ್ಣನ್
14. ಕೋಪೇ ವಂಶಸ್ಥರು
15. ಬುಡಗನ್
16. ಒಂಭತ್ತುವೃತ್ತಿ (ಕನ್ನಿ)
17. ಜಯರಾಮನ್
18. ಮುಕ್ಕಟ್ಟಿ
19. ಭೂಲೋಕನ್
20. ನಾಯಕರ್
21. ಕೊಮಾರ್
22. ಚಿಂತಾಮಣಿ
23. ಬೂದನೂರ್
24. ದೊಡ್ಡಮನೆ
25. ಸಂಪಳ್ಳಿ
26. ಕೋಯಿಲ್ ವಾಶಲ್
27. ಹರವು ವಂಶಸ್ಥರು
28. ಥಾಟ
29. ಅಪ್ಪನ್
30. ಅಮ್ಮಂಗಾತಂಬು
31. ಪಾಲಹಳ್ಳಿ

## IV. ಶ್ರೀವತ್ಸ ಗೋತ್ರ:

ಭಾರ್ಗವ, ಚ್ಯವನ, ಆಪ್ಲವಾನ, ಔರ್ವ, ಜಾಮದಗ್ನಿ ಋಷಿಗಳು.

(a) ಪ್ರತಿವಾದಿ ಭಯಂಕರಂ ಶ್ರೀವತ್ಸ:

1. ತೊಂಡನೂರು ಕಲ್ಕಿ ನರಸಿಂಹಯಂಗಾರ್ಯರೂ ನಾರಾಯಣಯ್ಯಂಗಾರ್ಯರೂ
2. ನಂಬಿತಂಬಿರಾನ್
3. ಕಣ್ಣಪ್ಪನ್
4. ಮುತ್ತೇಗೆರೆ
5. ಮಕರನ್
6. ಮಳೂರು ಆಜಿ
7. ಜಟಾವಲ್ಲಭರ್
8. ಅಪ್ಪಚ್ಚಾರ್
9. ನಾರಾಯಣಾಚಾರ್ಯರ್

(b) ಚಕ್ರವರ್ತಿ ಶ್ರೀವತ್ಸ:

1. ಪೆರಿಯಸ್ವಾಮಿ
2. ಪರಮೈಕಾಂತಿ
3. ಐಶಾಮಿ
4. ಚಿನ್ನ ನರಸಿಂಹಾಚಾರ್
5. ಸಣ್ಣಯ್ಯನ್
6. ಬಿಪ್ಪಹಟ್ಟಿ
7. ಗಂಟಿ
8. ಮೂಕ್ಕನ್ನಾಡಿ
9. ಮೈಸೂರು ರಂಗಾಚಾರ್ಯರು
10. ನಲ್ಲಾನ್
11. ಮಿಳಹಾಳ್ವಾರ್

(c) ಇತರ ಶ್ರೀವತ್ಸ (ಮೂರು ಪಂಗಡ):

1. ದಾಮೋದರಂ 2. ಅಂಬೂ 3. ಮುಡುಂಬೈ

## V. ಲೋಹಿತ ಗೋತ್ರ:

ವಿಶ್ವಾಮಿತ್ರ, ಅಘಮರ್ಷಣ, ಕೌಶಿಕ ಋಷಿಗಳು.

(a)

1. ಚೊಕ್ಕಮಾಮನ್
2. ಮಿನ್ನಾಣಿ } ನಾರಸಿಂಹ ಒಡೆಯರ್
3. ಚಿಕ್ಕಾಳಿ } ನಾರಸಿಂಹ ಒಡೆಯರ್
4. ಅಣ್ಣಾಸಾಮಿ } ನಾರಸಿಂಹ ಒಡೆಯರ್
5. ಅನನ್‌ದಾಣ್ ಪಿಳ್ಳೈ
6. ಬಸವೇರಾಜ
7. ಇಕ್ಕಳಕ್ಕಿ
8. ಭಗವದ್ಗೀತೆ

(b)

1. ಮಂಡಯಂ ಆಚಿ
2. ಮೈಸೂರು ಆಚಿ
3. ಅಪ್ಪುಚ್ಚಾರ್

ಲೋಹಿತ ಗೋತ್ರದವರು ಹಿಂದಿನಿಂದಲೂ ಎರಡು ಗುಂಪಿನವರಾಗಿ ಹೇಳಲ್ಪಟ್ಟಿರುವುದಕ್ಕೆ ಕಾರಣ, ದಂಡನಾಯಕನ ವಂಶವೊಂದು, ವೇದಾಂತಿ ರಾಮಾನುಜರ ಪಂಗಡವೊಂದು ಎಂದು ತಿಳಿಯಬರುತ್ತದೆ.

## VI. ವಾಸಿಷ್ಠ ಗೋತ್ರ:

ವಾಸಿಷ್ಠ, ಮೈತ್ರಾವರುಣ, ಕೌಂಡಿನ್ಯ ಋಷಿಗಳು.

1. ಬಿಡಿಮಣ್ಣಾಂ

VII. **ಶಾಂಡಿಲ್ಯ ಗೋತ್ರ:**
ಶಾಂಡಿಲ್ಯ, ಅಸಿತ, ದೈವಲ ಋಷಿಗಳು.

1. ಭಾರತಿ

VIII. **ಗೌತಮ ಗೋತ್ರ:**
ಅಂಗೀರಸ, ಆಹಿಲ್ಯ, ಗೌತಮ ಋಷಿಗಳು.

1. ಪೂಂಚಾಳಂ

IX. **ಕೌಂಡಿನ್ಯ ಗೋತ್ರ:**
ವಾಸಿಷ್ಠ, ಮೈತ್ರಾವರುಣ, ಕೌಂಡಿನ್ಯ ಋಷಿಗಳು.

1. ಗೋಮಠಂ (ಶ್ರೀನಿವಾಸ ಜೋಸ್ಯರ್)
2. ತೋಳಿ
3. ಕೇಶವಾಚಾರ್
4. ಪಾಮಸಮುದ್ರಂ
5. ಗ್ರಾಮಣಿ
6. ಮಕರನ್

X. **ಹಾರೀತ ಗೋತ್ರ:**
ಅಂಗೀರಸ, ಅಂಬರೀಷ, ಯೌವನಾಶ್ವ ಋಷಿಗಳು.

1. ಹೊನ್ನಲಗೆರೆ ಆಸೂರಿ
2. ಪ್ರೂಚಾಂಡಿ
3. ಎಂ. ಓ. ಪಾರ್ಥಸಾರಥಿ ಅಯ್ಯಂಗಾರ್
4. ಚೊಕ್ಕತಂಬು
5. ಪೆರಿಯಣ್ಣಾಜಿ
6. ವೀರಾಂಬುಧಿ
7. ಹಾಳಿ
8. ಅಗ್ರಹಾರಂ

XI. **ಆತ್ರೇಯ ಗೋತ್ರ:**
ಆತ್ರೇಯ, ಅರ್ಚನಾಶನ, ಶಾದಕ್ಷ ಋಷಿಗಳು.

1. ಸುಮಾನಿ
2. ಕೋಪೆ (ಶಿಂಗ್ಲಾಚಾರ್)
3. ತಿರುಪತಿ ಕುಟ್ಟಿಯಪ್ಪಾಜಿ
4. ನಾರಾಯಣ ಜೋಸ್ಯರ್
5. ಕೋಟಿ ಜೋಸ್ಯರ್(ಕ್ಯಾತನಹಳ್ಳಿ)
6. ಪರಶುರಾಮನ್

XII. ವಾಧೂಲ ಗೋತ್ರ:

ಭಾರ್ಗವ, ಪಾರಾಶರ್ಯ, ಸಾಮರಸ ಋಷಿಗಳು.

1. ಚೊತ್ತಿಕೊಳಂ
2. ಕೂತಾಡಿ
3. ಬುರುಡು
4. ಪಶಲ್
5. ಕೋಪೆ ನಾರಾಯಣನ್
6. ಮಡಕೆಹುಳಿ (ಕೃಷ್ಣಕುಮಾರನ್)
7. ಗಿಡ್ಡಯ್ಯನ್
8. ವೀಣೆ
9. ಕನ್ನಂಬಾಡಿ

ಕೋಪೆಯವರ ಕುಟುಂಬಗಳು ಮೂರು ಗೋತ್ರಗಳಲ್ಲಿ ಬಂದಿರುವುದಕ್ಕೆ ಕಾರಣವು ತಿಳಿದಿಲ್ಲ.

XIII. ಕೌಶಿಕ ಗೋತ್ರ:

ವಿಶ್ವಾಮಿತ್ರ, ಅಘಮರ್ಷಣ, ಕೌಶಿಕ ಋಷಿಗಳು.

(a) ಯಾಜುಷ:

1. ನಾಟಂಪಳ್ಳಿ
2. ಕೊಮಾರ್
3. ಬಿಂದಿಗೆ
4. ಮುದಿಗುಂಬಂ
5. ಕಾಯಿಬಜ್ಜಿ
6. ನಳ್ಳಿ
7. ಮನ್ನಿ
8. ಆಧ್ಯಾಪಕರ್
9. ಪುದುಚೇರಿ
10. ಗೋಧಿ

(b)

1. ದೇವಶಿಖಾಮಣಿ
2. ಮಾತ್ರೆ
3. ಚಂದಣಂ
4. ಶಾಮರಾಯರ್
5. ಟಿಪ್ಪಣಿ
6. ಗ್ರಾಮಣಿ
7. ಕರೂಹಟ್ಟಿ
8. ಒಂಬಾ ಶಿಂಗ್ರಿ
9. ಕೊತ್ತಾಗಾಲ
10. ಒಕ್ಕರಣೆ
11. ಒಂಟಿ
12. ಜಗ್ಗು

(c) ಸಾಮಕರು:

1. ಧಾಟಿ
2. ಮೈಸೂರು ಮುದ್ರೆ
3. ಪುಸ್ತಕಂ

ಹಿಂದೆ ನಿರೂಪಿಸಿದಂಗೆ ಮಂಡಯದ ಪ್ರಾಂತದಲ್ಲಿ ನೆಲಸಿದ ಮುಹನೀಯರು ಹದಿಮೂರು ಗೋತ್ರಗಳವರಲ್ಲಿ ಶಠಮರ್ಷಣ ಗೋತ್ರದವರು ಈಚೆಗೆ ಯಾರೂ ಇಲ್ಲವೆಂದು ತಿಳಿದುಬಂದಿದೆ.

ಗಾರ್ಗ್ಯ ಭಾರದ್ವಾಜ ಸಾಮಶಾಖೆಯಲ್ಲಿ ವಾಸಿಷ್ಠ ಗೋತ್ರದಲ್ಲಿ, ಶಾಂಡಿಲ್ಯ ಗೋತ್ರದಲ್ಲಿ ಮತ್ತು ಗೌತಮ ಗೋತ್ರದಲ್ಲಿ ಒಂದೊಂದೇ ಮನೆ ತನವವರು ಇರುವುದಾಗಿ ತಿಳಿದುಬಂದಿದೆ. ಇದು ಸರಿಯಾಗಿದೆಯೇ ಎಂಬುದು ನಿರ್ಧರವಾಗಬೇಕು.

ಮಂಡಯಂ ಶ್ರೀ ವೈಷ್ಣವರಲ್ಲಿ ಹದಿಮೂರು ಗೋತ್ರಗಳನ್ನು ಮೇಲೆ ನಿರೂಪಿಸಿದೆಯಷ್ಟೆ. ಈ ಹದಿಮೂರು ಗೋತ್ರಗಳವರ ಮತ್ತು ಕೆಲವು ಗೋತ್ರಗಳ ಶಾಖೆಗಳವರ ವಂಶವೃಕ್ಷಗಳನ್ನು ಪೂರ್ತಿಯಾಗಿ ಸಂಗ್ರಹಿಸಲು ಆಗಿಲ್ಲ. ಸುಮಾರು ಕ್ರಿ. ಶ. ೧೯೦೦ ನೇ ಇಸವಿಗಿಂತಲೂ ಬಹಳ ಹಿಂದೆಯೇ ಶ್ರೀ|| ಉ|| ಆಸೂರಿ ಅನಂದಾಳ್ವಾರ್ ಸ್ವಾಮಿಗಳವರು ನಮ್ಮ ಸಮುದಾಯದವರ ವಂಶವೃಕ್ಷಗಳು ಕೆಲವನ್ನು ತಯಾರಿಸಿದ್ದರು. ಬಹಳ ಪ್ರಯತ್ನದಿಂದ ಪ್ರತಿವಾದಿ ಭಯಂಕರಂ ಶ್ರೀವತ್ಸ ಗೋತ್ರದವರ ವಂಶವೃಕ್ಷ ಒಂದು ಅಚ್ಚು ಮಾಡಿಸಿದ್ದು ಶಿಥಿಲವಾಗಿ ಅಸಂಪೂರ್ಣವಾಗಿ ದೊರೆತಿದೆ. ಶ್ರೀ|| ಉ|| ಆಸೂರಿ ಅನಂದಾಳ್ವಾರ್ ಸ್ವಾಮಿಗಳು ಈ ಕೆಳಗೆ ವಿವರಿಸಿರುವ ವಂಶವೃಕ್ಷಗಳನ್ನು ಬರೆಯಲು ನಿರ್ಧರ ಮಾಡಿದ್ದುದು ಮಾತ್ರ ಆ ಮಹಾನುಭಾವರ ಕೈ ಬರೆಹದಲ್ಲಿಯೇ ಒಂದು ಪಟ್ಟಿಯು ದೊರೆತಿದೆ. ಇವುಗಳಲ್ಲಿ ಯಾವುದನ್ನು ಮುಗಿಸಿದ್ದರೋ ತಿಳಿಯದಾಗಿದೆ.

## "ವಂಶವೃಕ್ಷ ಬರೆಯಲು ತಯಾರಾಗಿದ್ದ ಗೋತ್ರಗಳ ಪಟ್ಟಿ"

1. ಮಂಡಯದ ಭಾರದ್ವಾಜ
2. ರಾಮಾನುಜಪುರಂ ಭಾರದ್ವಾಜ
3. ಚಕ್ರವರ್ತಿ ಶ್ರೀವತ್ಸ
4. ಪ್ರತಿವಾದಿ ಭಯಂಕರಂ ಶ್ರೀವತ್ಸ
5. ಇತರ ಶ್ರೀವತ್ಸ
6. ಲೋಹಿತ ೧ನೇ ಅಜಿ
7. ಲೋಹಿತ ೨ನೇ ಅಜಿ
8. ಇತರ ಅಜಿ
9. ಆತ್ರೇಯ (೩ ಗುಂಪು)
10. ವಾಧೂಲ

11. ಕೌಂಡಿನ್ಯ
12. ಕೌಶಿಕ (ಮಂಡಯ)
13. ಕೌಶಿಕ (ಟಿಪ್ಪಣಿ)
14. ಇತರ ಕೌಶಿಕ
15. ಶಾಂಡಿಲ್ಯ
16. ವಾಸಿಷ್ಠ
17. ಗೌತಮ
18. ಹಾರೀತ
19. ಸಾಮ ಕೌಶಿಕ
20. ಸಾಮ ಭಾರದ್ವಾಜ
21. ಇತರ ಗರ್ಗ

ಈಗ ದೊರೆತಿರುವ ಈ ಕೆಳಗೆ ವಿವರಿಸಿರುವ ವಂಶವೃಕ್ಷಗಳನ್ನು ಪ್ರತ್ಯೇಕವಾಗಿ ಮುದ್ರಿಸಿದೆ.

1. ಹಾರೀತ ಗೋತ್ರ
2. ರಾಮಾನುಜಪುರಂ ಭಾರದ್ವಾಜ
3. ಮಂಡಯಂ ಭಾರದ್ವಾಜ (ಸ್ವಲ್ಪ ಭಾಗ ಮಾತ್ರ)
4. ಮಂಡಯಂ ಭಾರದ್ವಾಜ (ಸ್ವಲ್ಪ ಭಾಗ)
5. ಪ್ರತಿವಾದಿ ಭಯಂಕರಂ ಶ್ರೀವತ್ಸ
6. ಚಕ್ರವರ್ತಿ ಶ್ರೀವತ್ಸ
7. ಕೌಶಿಕ (ರಾಯಪ್ಪನ್, ಮನ್ನಿ ಮುಂತಾದವರು)
8. ಕೌಶಿಕ (ದಿವಾನ್ ತಿರುಮಲೈಯ್ಯಂಗಾರ್ಯನ್, ಕಾಯ ಬಜ್ಜಿ ಮುಂತಾದವರು)
9. ಲೋಹಿತ ಗೋತ್ರ (ಭಾಗ)
10. ಕೌಂಡಿನ್ಯ ಗೋತ್ರ (ಭಾಗ)

ನಮ್ಮವರ ೧೪೦ ಪ್ರಧಾನ ಕುಟುಂಬಗಳ ಹೆಸರುಗಳನ್ನು ಗೋತ್ರ ರೀತಿಯಾಗಿ ಬರೆದಿದೆ. ಈ ಮೇಲ್ಕಂಡ ವಂಶವೃಕ್ಷಗಳನ್ನೂ ಆಯಾ ಗೋತ್ರಗಳ ಪ್ರಧಾನ ಕುಟುಂಬಗಳ ಹೆಸರುಗಳನ್ನೂ ಸರಿಹೋಲಿಸಿ ನೋಡಿದರೆ ಆಯಾ ವಂಶವೃಕ್ಷದ ಕುಟುಂಬದ ಶಾಖೆಗಳು ವ್ಯಕ್ತವಾಗುವುವು.

ಇನ್ನು ಮುಂದೆ ಕ್ರಿ. ಶ. ೧೯೫೦ ನೇ ಡಿಸಂಬರ್ ತಿಂಗಳ ಸುಮಾರಿನಲ್ಲಿ ನಮ್ಮ ಮಹಾಜನಗಳ ಪ್ರತ್ಯೇಕವಾದ ಸುಮಾರು ೭೦೦ ಒಕ್ಕಲುತನಗಳು

ಯಾವ ಯಾವ ಊರಿನಲ್ಲಿ ನೆಲಸಿದ್ದಾರೆ ಎಂಬುದನ್ನು ಪರಿಶಿಷ್ಟ ೧ ರಲ್ಲಿ ನಿರೂಪಿಸಿದೆ. ಒಬ್ಬೊಬ್ಬರೇ ಪ್ರತ್ಯೇಕವಾಗಿ ವಾಸಮಾಡುತ್ತಿದ್ದರೂ ಅವರನ್ನು ಒಂದು ಒಕ್ಕಲಾಗಿ ಪರಿಗಣಿಸಿದೆ. ಈ ಗಣತಿಯು ಖಂಡಿತವಾಗಿ ಪೂರ್ತಿ ಯಾಗಿಲ್ಲ. ಸರಿಯಾಗಿಯೂ ಇಲ್ಲ. ಆದರೂ ಮುಂದೆ ನಮ್ಮ ಮಹಾಜನರು ತಿದ್ದಿ ಸರಿಪಡಿಸಲು ಸ್ವಲ್ಪ ಅನುಕೂಲವಾಗುವುದೆಂದು ಬರೆದಿದೆ.

## ಪ್ರಕರಣ ೫

### ಶತಮಾನ ಶತಮಾನ ವರದಿಗಳು

ಮಂಡಯಂ ಶ್ರೀ ವೈಷ್ಣವ ಮಹಾಜನಗಳ ಆದಿಕಾಲದ ವರದಿಗಳು, ಹಿಂದೆಯೇ ತಕ್ಕಮಟ್ಟಿನ ಆಧಾರಗಳೊಡನೆ ವಿವರಿಸಿದಂತೆ, ಶ್ರೀ ರಾಮಾನುಜಾಚಾರ್ಯರು ಮಹದವತಾರ ಮಾಡಿದ (ಕ್ರಿ. ಶ. ೧೦೧೭) ಹನ್ನೊಂದ ನೆಯ ಶತಮಾನದಿಂದ ಈಚೆಗೆ ಸ್ವಲ್ಪ ಹೆಚ್ಚಾಗಿ ತಿಳಿದಿದೆ. ಆದುದರಿಂದ ೧೧ ನೆಯ ಶತಮಾನದಿಂದೀಚೆಗೆ ಆಯಾ ಶತಮಾನಗಳಲ್ಲಿ ನಡೆದ ವಿಷಯ ಗಳನ್ನು ತಿಳಿದಷ್ಟುಮಟ್ಟಿಗೆ ಬರೆದಿದೆ.

**೧೧ ನೆಯ ಶತಮಾನ :—**ಶ್ರೀ ತಿರುವನಂತಾಳ್ವಾರ್ ಸ್ವಾಮಿಗಳ ವರು ಕ್ರಿ. ಶ. ೧೦೫೩ ರಲ್ಲಿ ಶ್ರೀರಂಗಪಟ್ಟಣದ ಹತ್ತಿರ ಹಳೆಯ ಕಿರಂಗೂರಿ ನಲ್ಲಿ ಅವತರಿಸಿದುದು. ಈ ಮಹಾತ್ಮರಿಂದಲೇ ನಮ್ಮವರ ಈಚಿನ ಚರಿತ್ರೆಯು ಆರಂಭವಾಗಿದೆ.

**೧೨ ನೆಯ ಶತಮಾನ :—**ಈ ಶತಮಾನವು ಬಹಳ ಮುಖ್ಯ ವಾದುದು. ಶ್ರೀ ರಾಮಾನುಜರು ಯಾದವಪುರಿಯನ್ನು (ಮೇಲುಕೋಟೆ) ಸ್ಥಾಪಿಸಿದುದು. ಬಲ್ಲಾಳ ರಾಜನಾದ ಬಿಟ್ಟದೇವನು ಶ್ರೀ ರಾಮಾನುಜರ ಶಿಷ್ಯನಾಗಿ ವಿಷ್ಣುವರ್ಧನನೆಂಬ ನಾಮಧೇಯವನ್ನು ಪಡೆದು, ಕ್ರಿ. ಶ. ೧೧೧೭ ರಲ್ಲಿ ಶ್ರೀ ವೈಷ್ಣವ ಬ್ರಾಹ್ಮಣರಿಗೆ 'ಅಷ್ಟಗ್ರಾಮ' ಗಳೆಂಬ ಕಾವೇರೀ ತೀರದ ಎಂಟು ಗ್ರಾಮಗಳ ಜಹಗೀರನ್ನು ದಾನಮಾಡಿದನು.

ಹಿಂದೆಯೇ ವಿವರಿಸಿದಂತೆ, ಮಂಡಯದ ಅಗ್ರಹಾರವು ಈ ಶತಮಾನ ದಲ್ಲೇ ಇದ್ದಿತೆಂದು ಹೇಳಬೇಕಾಗಿದೆ.

**೧೩ ನೆಯ ಶತಮಾನ :—** ಕ್ರಿ. ಶ. ೧೨೭೬ ರಲ್ಲಿ ಸ್ಥಾಪಿತವಾದ ಹೊಸ ಬೂದನೂರು ಗ್ರಾಮದ ಶಾಸನದಲ್ಲಿ (ಮಂಡಯದ ೭೦ ನೇ ನಂಬರ್ ಶಾಸನ) ಮಂಡಯವು **'ಶ್ರೀಮದನಾದಿ ಅಗ್ರಹಾರ'** ವೆಂದು ನಿರೂಪಿಸ ಲ್ಪಟ್ಟದೆ.

**೧೪ ನೆಯ ಶತಮಾನ :—** ಕ್ರಿ. ಶ. ೧೩೨೬ ರಲ್ಲಿ ಬಲ್ಲಾಳ ರಾಜಧಾನಿ ಯಾದ ದ್ವಾರಸಮುದ್ರವು ನಶಿಸಿದಾಗ ಹಿಂದೆ ಬಂದಿದ್ದ ಜಹಗೀರುಗಳು ಕೈ ಬಿಟ್ಟುಹೋದುವು.

ಕ್ರಿ. ಶ. ೧೩೮೦ ರಲ್ಲಿ ವಿಜಯನಗರದ ಚಕ್ರವರ್ತಿಯು ತನ್ನ ಬಂಧು ವನ್ನು ಶ್ರೀ ರಂಗಪಟ್ಟಣದ ಶ್ರೀ ರಂಗರಾಯನನ್ನಾಗಿ ಎಂದರೆ ರಾಜಪ್ರತಿ ನಿಧಿಯಾಗಿ ಕಳುಹಿಸಿ ತಿರುವನಂತಾಚಾರ್ಯ ಸ್ವಾಮಿಗಳ ವಂಶದವರಾದ ಶ್ರೀ|| ಉ|| ಗೋವಿಂದರಾಜ ಉಡ್ಡೈಯರೆಂಬುವರಿಗೆ ಮಂಡಯ, ಅತ್ತಿಗುಪ್ಪೆ (ಈಗಿನ ಕೃಷ್ಣರಾಜಪೇಟೆ) ತಾಲ್ಲೋಕುಗಳಲ್ಲಿ ಇಪ್ಪತ್ತೊಂದು ಗ್ರಾಮಗಳನ್ನು ಜಹಗೀರಾಗಿ ಕೊಟ್ಟನು. ಇವರು ಕ್ರಮೇಣ ಶ್ರೀರಂಗರಾಯರಿಗೆ ಗುರು ಗಳಾದರು.

**೧೫ ನೆಯ ಶತಮಾನ :—** ಗೋವಿಂದರಾಜ ಉಡ್ಡೈಯರ ಅನಂತರ ಇವರ ತಮ್ಮ ತಿರುಮಲೈಯ್ಯಂಗಾರ್ಯರೆಂಬುವರು ಗುರುಪೀಠವನ್ನಲಂಕರಿ ಸಿದರು.

ಈ ಶತಮಾನದ ನಮ್ಮ ಕಥಾಪುರುಷರು ನಾಗಮಂಗಲಾಧಿಪತಿ ತಿಮ್ಮಣ್ಣ ದಂಡನಾಯಕರು (ತಿರುಮಲಾಚಾರ್ಯರು) ಕಾಲಕ್ರಮದಿಂದ ವಿಜಯನಗರದ ಆಗಿನ ರಾಜಪ್ರತಿನಿಧಿಯ ಮಂತ್ರಿಗಳಾಗಿದ್ದರು. ಇವರು ಲೋಹಿತ ಗೋತ್ರ ದವರು.

ಶ್ರೀ ರಾಮಾನುಜರಿಂದ ಉದ್ಧಾರವಾದ ತಿರುನಾರಾಯಣಪುರವು ೧೪ ನೆಯ ಶತಮಾನದಲ್ಲಿ ದ್ವಾರಸಮುದ್ರವು ನಾಶವಾದನಂತರ ಅಲ್ಲಿಂದ ತೊಂಡನೂರಿಗೆ ಓಡಿಬಂದು, ಹೊಯ್ಸಳ ರಾಯನನ್ನು ಅಟ್ಟಿಸಿಕೊಂಡು

ಬಂದಾಗ, ಮುಸಲ್ಮಾನರ ಕೋಪಕ್ಕೆ ಈಡಾಗಿ ಹಾಳಾಯಿತು. ಹೀಗೆ ಹಾಳಾದ ತಿರುನಾರಾಯಣಪುರವನ್ನು ತಿಮ್ಮಣ್ಣ ದಂಡನಾಯಕರು ಜೀರ್ಣೋದ್ಧಾರ ಮಾಡಿದರು. ತಿರುನಾರಾಯಣಪುರದ ಶಾಸನ ಒಂದರಲ್ಲಿ (ಕ್ರಿ. ಶ. ೧೪೫೮, ಶ್ರೀರಂಗಪಟ್ಟಣದ ತಾಲ್ಲೋಕು ಶಾಸನ ೮೯) ತಮ್ಮನ್ನು **'ಯಾದವಗಿರಿ ಜೀರ್ಣೋದ್ಧಾರಕ'** ಎಂದು ಕರೆದುಕೊಂಡಿದ್ದಾರೆ. ಇವರು ಕ್ರಿ. ಶ. ೧೪೬೨ ರಲ್ಲೇ ನಾಗಮಂಗಲದಲ್ಲಿ ಆಳುತ್ತಿದ್ದರೆಂದು ತಿಳಿಯುತ್ತದೆ. ಈ ಶಾಸನವು ನಮ್ಮ ಸಮುದಾಯಕ್ಕೆ ಬಹಳ ಮುಖ್ಯವಾದದ್ದು.

ಇವರನ್ನು ಈಗಲೂ ನಮ್ಮವರಲ್ಲಿ 'ತಿಮ್ಮಣ್ಣ ದಂಡಾನಾಯಕರು' ಎನ್ನುವುದಕ್ಕೆ ಬದಲಾಗಿ 'ಡಣಾಯಕರು' ಎಂದು ಕರೆಯುವ ಅಭ್ಯಾಸವಾಗಿ ಹೋಗಿದೆ.

**೧೬ ನೇಯ ಶತಮಾನ:**—ಈ ಶತಮಾನದಲ್ಲೇ ಮಂಡಯವು ಸ್ಥಿರವಾಗಿ ಸ್ಥಾಪಿತವಾದದ್ದು. ಕ್ರಿ. ಶ. ೧೫೨೬ ರಲ್ಲಿ ವಿಜಯನಗರಾಧಿಪತಿ ಕೃಷ್ಣದೇವರಾಯನು ಮಂಡಯವನ್ನೊಳಗೊಂಡ ಆರು ಗ್ರಾಮಗಳನ್ನು ತಿರುಮಲೈ ಅನನ್ತಾಣ್ ಪಿಳ್ಳೈ ಗೋವಿಂದರಾಜ ಉಡೈಯರಿಗೆ ದಾನಮಾಡಿದ್ದು. ತಿರುವನನ್ತಾಳ್ವಾರ್ ಸ್ವಾಮಿಗಳ ೧೨ ನೇಯ ತಲೆಯವರೆಂದು ಹೇಳುತ್ತಾರೆ.

ಕ್ರಿ. ಶ. ೧೫೫೮ ರಲ್ಲಿ ಮಾಚೇನಹಳ್ಳಿಯು ಶ್ರೀ || ಉ || ಶ್ರೀನಿವಾಸಾಚಾರ್ಯ ಅಥವಾ ಅಪ್ಪೂವಾಚಾರ್ಯರಿಗೆ ವಿಜಯನಗರಾಧಿಪತಿ ಸದಾಶಿವರಾಯನಿಂದ ದೊರೆಯಿತು. ಮಾಚೇನಹಳ್ಳಿಗೆ ರಾಮಾನುಜಪುರವೆಂದು ನಾಮಕರಣಮಾಡಿದರು. ಮೇಲಿನ ಈ ಎರಡು ಶಾಸನಗಳ ವಿಚಾರವೂ ಹಿಂದೆಯೇ ನಿರೂಪಿತವಾಗಿದೆ.

ಕ್ರಿ. ಶ. ೧೫೭೬ ನಲ್ಲಿ ಮೈಸೂರು ರಾಜಒಡೆಯರವರ ಶಾಸನದಲ್ಲಿ ಮಂಡಯಂ ಸಮುದಾಯದವರ ಹೆಸರುಗಳಿವೆ.

**೧೭ ನೇಯ ಶತಮಾನ:**—ನಮ್ಮವರಿಗೆ ಮೈಸೂರು ಪ್ರಧಾನತ್ವವು ದೊರೆತಿದ್ದು ಈ ಶತಮಾನದಲ್ಲಿಯೇ. ಕ್ರಿ. ಶ. ೧೬೦೮ ರಲ್ಲಿ ಮೈಸೂರು ರಾಜಒಡೆಯುವರು ಶ್ರೀರಂಗಪಟ್ಟಣವನ್ನು ಆಕ್ರಮಿಸಿದರು. ಇದಕ್ಕೆ ವಿಜಯನಗ

ರದ ಒಪ್ಪಿಗೆಯು ಅವಶ್ಯವಾಗಿತ್ತು. ಈ ಒಪ್ಪಿಗೆಯನ್ನು ಗೋವಿಂದರಾಜ ಒಡೆಯರ ವಂಶೀಯರಾದ ಇನ್ನೊಬ್ಬ ತಿರುಮಲೈಯ್ಯಂಗಾರ್ಯರು ಪಡೆದು ತಂದು, ರಾಜ ಒಡೆಯರವರಿಗೆ ಒಪ್ಪಿಸಿದರು. ಇದಕ್ಕಾಗಿ ತಿರುಮಲೈಯ್ಯಂಗಾರ್ಯರಿಗೆ ಒಂದು ಜಹಗೀರಿಯೂ ದೊರೆಯಿತು. ರಾಜರ ಪ್ರಧಾನರಾಗಿಯೂ ನೇಮಿಸಲ್ಪಟ್ಟರು

ಕ್ರಿ. ಶ. ೧೬೫೯ ರಲ್ಲಿ ಮೈಸೂರು ರಾಜರಾದ ಕಂಠೀರವ ನರಸರಾಜ ಒಡೆಯರವರು ಸಂತತಿ ಇಲ್ಲದೆ ಪರಂಧಾಮವನ್ನೈದಿದರು. ಆಗ ಪ್ರಧಾನ ತಿರುಮಲೈಯ್ಯಂಗಾರ್ಯರ ಮಕ್ಕಳಾದ ಅಪ್ಪಾಜಯ್ಯ ಅಥವಾ ಗೋವಿಂದ ರಾಜಯ್ಯನವರು ದೊಡ್ಡದೇವರಾಜ ಒಡೆಯರವರಿಗೆ ಪಟ್ಟವಾಗಬೇಕೆಂದು ಸಾಧಿಸಿ ಜಯಿಸಿದರು. ಈ ಕಾರಣದಿಂದ ಪ್ರಧಾನರು ಮೊದಲಿಗಿಂತಲೂ ಹೆಚ್ಚಾಗಿ ಪ್ರಾಬಲ್ಯವನ್ನು ಹೊಂದಿದವರಾದರು.

ಕ್ರಿ. ಶ. ೧೬೭೨ ರಲ್ಲಿ ದೊಡ್ಡದೇವರಾಜ ಒಡೆಯರವರ ಮಕ್ಕಳು ಚಿಕ್ಕ ದೇವರಾಜ ಒಡೆಯರವರು ಅರಸರಾದರು. ಇವರ ಮಂತ್ರಿ ವಿಶಾಲಾಕ್ಷಪಂಡಿತರು ಕ್ರಿ. ಶ. ೧೬೮೬ ರಲ್ಲಿ ಗತಿಸಿದಾಗ, ಪ್ರಧಾನ ಅಪ್ಪಾಜಯ್ಯನವರಿಗೆ ರಾಜರು ಮಂತ್ರಿ ಪದವಿಯನ್ನು ಅಂಗೀಕರಿಸುವಂತೆ ಹೇಳಿದರು. ಆದರೆ ಪ್ರಧಾನ ಅಪ್ಪಾಜಯ್ಯನವರು ತಮ್ಮ ಮಗಳ ಮಗನಾದ ತಿರುಮಲೈಯ್ಯಂಗಾರ್ಯರನ್ನು ಮಂತ್ರಿಯನ್ನಾಗಿ ನೇಮಕಮಾಡಿಸಿದರು. ಇವರು ಬಹುಕಾಲ ಆ ರಾಜನ ಮಂತ್ರಿಯಾಗಿ ಅವನ ಯಶಸ್ಸಿಗೆ ಮುಖ್ಯಕಾರಣರಾದರು. ಆ ರಾಜನು ಕಾಲವಾದನಂತರ ಅವನ ಮೂಕ ಮಗನಿಗೆ ಪಟ್ಟವನ್ನು ಕಟ್ಟಿ ರಾಜ್ಯಸೂತ್ರವನ್ನು ಹಿಡಿದು ನಡೆಸಿದರು. ತಿರುಮಲೈಯ್ಯಂಗಾರ್ಯರು ರಾಜತಂತ್ರ ನಿಪುಣರುಮಾತ್ರವಲ್ಲದೆ ಘನಪಂಡಿತರು, ಮಹಾಕವಿಗಳು, ತತ್ವಜ್ಞರು, ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪ್ರಖ್ಯಾತ ಗ್ರಂಥಕರ್ತರೂ ಆಗಿದ್ದರು.

ತಿರುಮಲಸಾಗರ, ಗ್ರಾಮ, ಛತ್ರಗಳನ್ನು ಇವರು ಕಟ್ಟಿಸಿದರು. ತಿರುನಾರಾಯಣಪುರದಲ್ಲಿ ಶ್ರೀರಾಮಾನುಜರ ಸನ್ನಿಧಿಯನ್ನು ಕಟ್ಟಿಸಿದ ಪುಣ್ಯಾತ್ಮರೂ ಇವರೇ.

ದಕ್ಷಿಣದೇಶದ ಯಾತ್ರೆಗೆ ಹೋಗಿದ್ದಾಗ ಇವರಿಗೆ ಮಧುರೆಯ ಅರಸು 'ಮಂತ್ರಿತ್ವ'ವನ್ನು ನೀಡಿ ಕರೆಸಿದನಂತೆ.

ಮೈಸೂರು ಅರಸರ ಹೆಚ್ಚಿಗೆಯನ್ನು ಸ್ಥಿರಪಡಿಸಿದವರಿವರು. ಮಂಡಯ ಸಮುದಾಯದಲ್ಲಿ ಬಹಳ ಪ್ರಖ್ಯಾತರು.

**೧೮ ನೆಯ ಶತಮಾನ**:—ಈ ಶತಮಾನದ ಮುಖ್ಯ ಮಹಾಪುರುಷರು ಪ್ರಧಾನ ತಿರುಮಲರಾವ್ ಮತ್ತು ನಾರಾಯಣರಾವ್ ಎಂಬ ಸಹೋದರರು.

ಪ್ರಧಾನ ಅಪ್ಪಾಜಯ್ಯನವರೂ, ಮಂತ್ರಿ ತಿರುಮಲೈಯ್ಯಂಗಾರ್ಯರೂ ಈ ಶತಮಾನದ ಆದಿಯಲ್ಲೇ ಪರಮಪದಿಸಿದ್ದರು.

ಕ್ರಿ. ಶ. ೧೭೩೪ ರಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರವರ ರಾಣಿ ಪುಟ್ಟಮಣ್ಣಿಯವರು ಗತಿಸಿದರು. ಆಗ ಪ್ರಧಾನ ಅಪ್ಪಾಜಯ್ಯನವರ ಮೊಮ್ಮಗ ಪ್ರಧಾನ ಗೋವಿಂದರಾಜಯ್ಯನವರು ರಾಜರಿಗೆ ಲಕ್ಷ್ಮಮ್ಮಣ್ಣಿ ಮತ್ತು ದೇವಾಜಮ್ಮಣ್ಣಿಯವರನ್ನು ಮದುವೆ ಮಾಡಿಸಿದರು.

ಕ್ರಿ. ಶ. ೧೭೬೧ ರಲ್ಲಿ ಹೈದರನು ಮೈಸೂರು ರಾಜ್ಯಸೂತ್ರವನ್ನು ಕಸಿದುಕೊಂಡದ್ದು ಎಲ್ಲರಿಗೂ ತಿಳಿದ ಅಂಶ. ಕ್ರಿ. ಶ. ೧೭೬೫ ರಲ್ಲಿ ಹೈದರನು ಪ್ರಧಾನ ಗೋವಿಂದರಾಜಯ್ಯನವರ ಮನೆತನದ ಆಸ್ತಿಯನ್ನೆಲ್ಲಾ ದೋಚಲು ಯತ್ನಿಸಿ, ಕಡೆಗೆ ಪ್ರಧಾನರನ್ನೇ ಕೊಲ್ಲಿಸಿದನೆಂದೂ ತಿಳಿದು ಬರುತ್ತದೆ.

ಇವರು ತಿರುಮಲರಾವ್ ಮತ್ತು ನಾರಾಯಣರಾವ್ ಎಂಬಿಬ್ಬರು ಸುಕುಮಾರರನ್ನು ಪಡೆದಿದ್ದರು. ಈ ತಿರುಮಲರಾವ್ ನಾರಾಯಣರಾಯರೇ ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ಪ್ರಧಾನರಾದರು.

ಇಮ್ಮಡಿ ಕೃಷ್ಣರಾಜ ಒಡೆಯರವರ ಕಾಲಾನಂತರ, ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಹೈದರ್ ಮತ್ತು ಟಿಪ್ಪುವಿನ ದರ್ಪವನ್ನು ಮುರಿದು, ಮೈಸೂರು ರಾಜ್ಯವು ಮೈಸೂರು ಒಡೆಯರವರ ಮನೆತನಕ್ಕೇ ಮತ್ತೆ

ಬರಲು, ಮರಾಠೆಯವರೊಡನೆಯೂ ಇಂಗ್ಲೀಷರೊಡನೆಯೂ ಸಂಧಾನವನ್ನು ಬಹುವಾಗಿ ನಡೆಸಿದರು.

ಇಂಗ್ಲೀಷಿನವರೊಂದಿಗೆ ಪ್ರಧಾನ್ ತಿರುಮಲರಾವ್ ಮತ್ತು ನಾರಾಯಣರಾಯರು ಸಂಧಾನವನ್ನು ನಡೆಯಿಸಲು ನೇಮಿತರಾದರು. ಈ ಸಂಧಾನದ ಫಲಿತಾಂಶವು ಅನುಕೂಲವಾದಾಗ ಇವರ ಖರ್ಚನ್ನೂ, ವಂಶ ಪಾರಂಪರ್ಯವಾಗಿ ಮೈಸೂರು ಮಂತ್ರಿಪದವಿಯನ್ನೂ ಇವರಿಗೇ ಕೊಡುವದಾಗಿ ವಾಗ್ದಾನವಾಗಿತ್ತು.

ಇದಕ್ಕಾಗಿ ಪ್ರಧಾನ್ ಸಹೋದರರು ಇಂಗ್ಲೀಷರ ಸ್ನೇಹವನ್ನು ಬೆಳೆಯಿಸಿ, ಅನೇಕ ಕಷ್ಟಪರಂಪರೆಗಳನ್ನನುಭವಿಸಿ, ಕಡೆಗೆ ಕ್ರಿ. ಶ. ೧೭೯೯ ರಲ್ಲಿ ಟಿಪ್ಪುವು ಇಂಗ್ಲೀಷರಿಂದ ಕೊಲ್ಲಲ್ಪಟ್ಟ ಅನಂತರ ಮೈಸೂರುರಾಜ್ಯವು ಮೈಸೂರು ಒಡೆಯರವರ ಪ್ರಸಿದ್ಧ ವಂಶಕ್ಕೇ ಸೇರಿ ಮುಮ್ಮಡಿಕೃಷ್ಣರಾಜ ಒಡೆಯರವರು ಸಿಂಹಾಸನವನ್ನೇರಿದುದನ್ನು ನೋಡಿ ಆನಂದಿಸಿದ ಚರಿತ್ರೆಯು "The Mysore Pradhans" ಎಂಬ ಪುಸ್ತಕದಲ್ಲಿ ವಿವರವಾಗಿದೆ.

ಕ್ರಿ. ಶ. ೧೭೮೩ ರಲ್ಲಿ ಟಿಪ್ಪುವು ಪ್ರಧಾನ ತಿರುಮಲರಾಯರ ಮತ್ತು ಇತರರ ಸುಮಾರು ೭೦೦ ಸಂಸಾರಗಳನ್ನು ಕೊಲ್ಲಿಸಿ ಪ್ರಧಾನರ ಆಸ್ತಿ ಜಹಗೀರಿಗಳನ್ನೆಲ್ಲಾ ಕಸಿದುಕೊಂಡನೆಂದು ತಿಳಿದುಬರುತ್ತದೆ. ಈ ಭೀಕರ ಕೊಲೆಯು ನಡೆದದ್ದು ನರಕಚತುರ್ದಶಿಯ ದಿವಸ. ಆದುದರಿಂದ ಕೊಲೆಗೆ ಗುರಿಯಾದ ವಂಶದವರು ಈ ಹಬ್ಬವನ್ನು ಈಗಲೂ ಆಚರಿಸುವುದಿಲ್ಲವೆನ್ನುತ್ತಾರೆ.

ಪ್ರಧಾನ ತಿರುಮಲರಾಯರ ಸಾಹಸ, ಸಹಾಯಗಳಿಗೆ ಮೆಚ್ಚಿ ಇಂಗ್ಲೀಷರೇ ಇವರಿಗೆ ಮೈಸೂರು ದಿವಾನ್ ಗಿರಿಯನ್ನು ಕೊಡಲು ಏರ್ಪಡಿಸಿದ್ದರು. ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಇದಕ್ಕಾಗಿ ಬಹಳ ಒತ್ತಾಯಪಡಿಸಿದರು. ಆದರೂ ಇಂಗ್ಲೀಷರೇ ಕಾರಣಾಂತರಗಳನ್ನು ಕಲ್ಪಿಸಿಕೊಂಡು, ಕೊಟ್ಟ ಭಾಷೆಗೆ ತಪ್ಪಿ, ಪೂರ್ಣಯ್ಯನೆಂಬವರನ್ನು ದಿವಾನರನ್ನಾಗಿ ನೇಮಿಸಿ, ತಿರುಮಲರಾಯರಿಗೆ ಮಹಾನ್ಯಾಯವನ್ನು ಮಾಡಿ, ಮಹಾರಾಣಿಯವರಿಗೂ ಖೇದವನ್ನುಂಟುಮಾಡಿದರು.

ಪ್ರಧಾನ ಸಹೋದರರಿಗೆ ಇಂಗ್ಲೀಷರಿಂದಲೂ, ಮೈಸೂರು ಖಜಾನೆ ಯಿಂದಲೂ ಪೆನ್ಷನ್‌ಗಳು ಮಾತ್ರ ಸಲ್ಲುತ್ತಿದ್ದುವು.

**೧೯ ನೆಯ ಶತಮಾನ :—**ಕ್ರಿ. ಶ. ೧೮೧೧ ರಲ್ಲಿ ಪ್ರಧಾನ್ ನಾರಾಯಣರಾಯರು ಮೈಸೂರಿನಲ್ಲೂ, ೧೮೧೫ ರಲ್ಲಿ ಪ್ರಧಾನ ತಿರುಮಲರಾಯರು ಮದ್ರಾಸಿನಲ್ಲೂ ಪರಮಪದಿಸಿದರು. ಇವರುಗಳಿಗೆ ಸಲ್ಲುತ್ತಿದ್ದ ಪೆನ್ಷನ್‌ಗಳೂ ನಿಂತುಹೋದುವು. ಶ್ರೀ॥ ಉ। ತಿರುಮಲರಾಯರ ದಹನಸ್ಥಳದ ವಿವರಗಳನ್ನು ಮುಂದಣ ಅಧ್ಯಾಯದಲ್ಲಿ ಕೊಟ್ಟಿದೆ.

ಮಂಡಯದ ಶ್ರೀ ಲಕ್ಷ್ಮೀಜನಾರ್ದನಸ್ವಾಮಿಯವರ ದೇವಸ್ಥಾನದ ಉಪಯೋಗಕ್ಕಾಗಿ ತಿರುಮಲರಾಯರು ಮಂಡಯದಲ್ಲಿ ಒಂದು ಕೊಳ, ಮಂಟಪ, ಮತ್ತು ಒಂದು ತೋಪು ಇವನ್ನು ಕ್ರಿ. ಶ. ೧೮೧೦ ರಲ್ಲಿ ನಿರ್ಮಿಸಿದರು. "ತಿರುಮಲಾಚಾರ್ ತೋಪು, ಕೊಳ" ಎಂದು ಈಗಲೂ ರೂಢಿಯಲ್ಲಿವೆ. ಕೊಳದ ನಾಲ್ಕು ಮೂಲೆಗಳಲ್ಲೂ ಕಲ್ಲಿನಲ್ಲಿ ಕೆತ್ತಲ್ಪಟ್ಟ ನಾಲ್ಕು ಶಾಸನಗಳಿವೆ. ಇವು ಗ್ರಂಥ, ಅರವ, ಕನ್ನಡ ಮತ್ತು ನಾಗರ ಅಕ್ಷರಗಳಲ್ಲಿವೆ. ಇವು ಮಂಡಯದ ತಾಲ್ಲೋಕು ೬೩, ೬೪, ೬೫ ಮತ್ತ ೬೬ನೇ ನಂಬರು ಶಾಸನಗಳಾಗಿ ಸರ್ಕಾರದಿಂದ "ಎಫಿಗ್ರಾಫಿಕಾ ಕರ್ಣಾಟಕ"ದಲ್ಲಿ ಅಚ್ಚಾಗಿವೆ.

ಕೊಳಕ್ಕೆ "ಗೋವಿಂದರಾಜ ಪುಷ್ಕರಿಣಿ" ಎಂದೂ ತೋಪಿಗೆ "ಗೋವಿಂದರಾಜೋದ್ಯಾನ" ವೆಂದೂ ಶಾಸನದಲ್ಲಿ ಹೆಸರುಗಳು ನಮೂದಾಗಿವೆ. ಈ ಶಾಸನಗಳ ನಕಲುಗಳನ್ನು ಬೇರೆ ಪ್ರಕರಣದಲ್ಲಿ ಕೊಟ್ಟಿದೆ. "ಶ್ರೀರಂಗಪಟ್ಟಣದ ತಿರುಮಲೆ ಅನಂದಾಂಪಿಳ್ಳೈ ಗೋವಿಂದರಾಜರ ಕುಮಾರರು ತಿರುಮಲಾಚಾರ್ಯರ ಧರ್ಮ" ಎಂದು ನಮೂದಿದೆ. ಗ್ರಂಥ ಮತ್ತು ಅರವ ಅಕ್ಷರಗಳಲ್ಲಿ ಇವರ ಮಂತ್ರಿತ್ವವು ಸೂಚಿತವಾಗಿದೆ.

ಈ ಕೊಳವೂ ಮಂಟಪವೂ ಅಂದಿನಿಂದ ಇಂದಿನವರೆಗೂ ಶ್ರೀ ಲಕ್ಷ್ಮೀಜನಾರ್ದನ ಸ್ವಾಮಿಯವರ ರಥೋತ್ಸವದಲ್ಲಿ ಜರುಗುವ ಗಜೇಂದ್ರಮೋಕ್ಷದ ಉತ್ಸವಕ್ಕಾಗಿ ಉಪಯೋಗಿಸಲ್ಪಡುತ್ತಿವೆ.

ಟಿಪ್ಪುವಿನ ಕಾಲಾನಂತರ ಮಂಡಯದ ಇನಾಮತಿಯನ್ನು ಪುನಃ ಸಂಪಾದಿಸಲು ನಮ್ಮವರು ಬಹಳ ಪ್ರಯತ್ನಪಟ್ಟರು. ಆಗ ಮಂಡಯದಲ್ಲಿದ್ದ ವರನ್ನು ಯುಕ್ತಿಯಿಂದ ಒಳಪಡಿಸಿ, ಸ್ಥಳವಾಸಿಗಳಿಗೆ ೩೨ ರೂಪಾಯಿಗಳ ಬೆಲೆಬಾಳುವಷ್ಟು ಅಕ್ಕಿಯನ್ನು ಪ್ರತಿ ತಿಂಗಳಲ್ಲೂ ಕೊಡುವಂತೆ ಮಾಫಾ ಡಾಯಿತು. ಈ ಸ್ಥಳವಾಸದ ಅಕ್ಕಿಯೂ ಈಗ (ಕ್ರಿ. ಶ. ೧೯೫೦) ಬಹಳ ಕಡಿಮೆ ದರ್ಜೆಗೆ ಇಳಿಸಲ್ಪಟ್ಟು ನಡೆದುಬರುತ್ತಿದೆ. ನಮ್ಮ ಮಹಾಜನಗಳ ಪ್ರಯತ್ನವು ನಡೆಯದಿದ್ದರೆ ಈ ಸ್ಥಳವಾಸದ ಅಕ್ಕಿಯೂ ನಿಂತುಹೋಗಿ, ಗೋವಿಂದರಾಜಪುಷ್ಕರಿಣಿಯ ಶಾಸನಗಳೂ ಮರೆಯಾಗಿ, ನಮ್ಮ ಹಿಂದಣ ಚರಿತ್ರೆಯೇ ಅಳಿಸಿಹೋಗುವ ಸಂಭವವು ತೋರಿಬರುತ್ತಿದೆ. ನಮ್ಮವರು ಮನವಿ ಮಾಡಿಕೊಂಡದ್ದು ಫಲವಿಲ್ಲದೆ ಗೋವಿಂದರಾಜೋದ್ಯಾನವು ಮಂಡ್ಯದ ಸಕ್ಕರೆ ಕಾರ್ಖಾನೆಯ ಉಪಯೋಗಕ್ಕಾಗಿ ಸರ್ಕಾರದವರಿಂದ ತೆಗೆದುಕೊಳ್ಳಲ್ಪಟ್ಟಿತು. ಬದಲಾಗಿ ದೇವಸ್ಥಾನಕ್ಕೆ ಕೊಟ್ಟ ಬೆಲೆಯು ಸಾಲದೆಂದು ನ್ಯಾಯಸ್ಥಳದಲ್ಲಿ ನಮ್ಮವರು ಕೆಲ ಮಹನೀಯರು ನಿಂತು ವಾದ ನಡೆಯಿಸಿ ಅಲ್ಪಸ್ವಲ್ಪ ಹೆಚ್ಚಾಗಿ ಮೊಬಲಗನ್ನು ಈಗತಾನೇ ಪಡೆದದ್ದಾಯಿತು. ಚರಿತ್ರಾರ್ಹವಾದ ತೋಪನ್ನೂ ಕಳೆದುಕೊಂಡದ್ದಾಯಿತು. ಶಾಸನಗಳೂ, ಪುಷ್ಕರಿಣಿಯೂ, ಗಜೇಂದ್ರಮೋಕ್ಷದ ಮಂಟಪವೂ ಇವಾದರೂ ಸ್ಥಿರವಾಗಿ ನಿಲ್ಲುವಂತೆಯೂ, ಸ್ಥಳವಾಸದ ಅಕ್ಕಿಯು ಹೆಚ್ಚಾಗಿ, ಶಾಶ್ವತವಾಗಿ ನಡೆದುಬರುವಂತೆಯೂ ನಮ್ಮ ಮಹಾಜನಗಳು ಸರ್ಕಾರದವರನ್ನು ಪ್ರಾರ್ಥಿಸಿ ಸ್ಥಿರಪಡಿಸಿಕೊಳ್ಳಬೇಕೆಂದು ಪ್ರಾರ್ಥನೆ.

ಮಂಡಯಗ್ರಾಮದ ಪಶ್ಚಿಮದಲ್ಲಿ ಶಿಂಗ್ರೈಯ್ಯಂಗಾರ್ ಕೊಳ ಮತ್ತು ತೋಪು ದೇವಸ್ಥಾನದ ಉಪಯೋಗಕ್ಕಾಗಿ ಬಿಡಲ್ಪಟ್ಟಿದ್ದುವು. ಈ ತೋಪಿನ ಅನೇಕ ಭಾಗವು ಸಹ ಗ್ರಾಮವಿಸ್ತಾರದ ನಾನಾಕಾರ್ಯಗಳಿಗಾಗಿ ಸರ್ಕಾರದವರಿಂದ ತೆಗೆದುಕೊಳ್ಳಲ್ಪಟ್ಟು ಹಂಚಿಹರಿದುಹೋದದ್ದಾಯಿತು. ಅಲ್ಪಸ್ವಲ್ಪ ಉಳಿದಿರುವುದೂ ಕೈಬಿಟ್ಟು ಹೋಗಬಹುದಾಗಿದೆ. ಕೊಳದ ಬಳಿಯ ಮಂಟಪವೂ ದೇವಸ್ಥಾನಕ್ಕಾಗಿ ನಮ್ಮವರಿಂದಲೇ ಉಳಿಸಿಕೊಂಡುಬಂದಿರುವುದಾಗಿದೆ. ಶ್ರೀಮದಶ್ಯಾದಿ ಬೂದನೂರು ಅನಂದಾಳ್ವಾರ್ ಸ್ವಾಮಿಗಳವರು ಶ್ರೀ ಜನಾ

ದಾಸಸ್ವಾಮಿಯವರ ರಥೋತ್ಸವಕೈಂಕರ್ಯವನ್ನು ಈ ಕೊಳ, ಮಂಟಪದಲ್ಲಿ ಪ್ರತಿ ಸಂವತ್ಸರದಲ್ಲಿಯೂ ನಡೆಯಿಸಿಕೊಂಡು ಬರುತ್ತಲಿದ್ದಾರೆ. ಈ ಗ್ರಂಥವನ್ನು ಬರೆದ ಮಂಡಯಂ ಜಟಾವಲ್ಲಭ ಶಿಂಗ್ರೈಯ್ಯಂಗಾರ್ಯರ ಹಿರಿಯರು ಈ ಕೊಳವನ್ನೂ ರಾಮಾನುಜಪುರದ ಕೊಳವನ್ನೂ ಮೇಲುಕೋಟೆಯಲ್ಲಿ ಒಂದು ಕೊಳವನ್ನೂ ಕಟ್ಟಿಸಿರುವುದೆಂದು ತೋರುತ್ತದೆ. ಈ ಕೊಳ, ಮಂಟಪ, ಉಳಿದಿರುವ ತೋಪಿನ ಭಾಗವನ್ನಾದರೂ ದೇವಸ್ಥಾನಕ್ಕಾಗಿ ಶಾಶ್ವತವಾಗಿ ನಿಲ್ಲಿಸಿಕೊಳ್ಳಲು ಪ್ರಯತ್ನಿಸಬೇಕಾದುದು ನಮ್ಮೂರ ಆ ಸಮಯದ ಕರ್ತವ್ಯವಾಗಿದೆ. ಈ ಸಿಂಗ್ರೈಯ್ಯಂಗಾರ್ ಕೊಳ, ತೋಪುಗಳ ವಿಚಾರವು ಬಹಳ ಹಿಂದಣ ಶತಮಾನಗಳ ವಿಚಾರವಾದರೂ ದೇವಸ್ಥಾನದ ಸ್ವತ್ತುಗಳಾದುದರಿಂದ ಈ ಶತಮಾನದ ವರದಿಯೊಡನೆಯೇ ಒಂದೆಡೆಯಲ್ಲಿ ನಿರೂಪಿಸಿದೆ.

ಪ್ರಧಾನ ನಾರಾಯಣರಾಯರ ಮಕ್ಕಳು ತಿರುಮಲರಾಯರು ತಿರುಚನಾಪಳ್ಳಿ ಕಲೆಕ್ಟರ್ ಆಫೀಸಿನಲ್ಲಿ ಹೆಡ್ ಶಿರಸ್ತೇದಾರರಾಗಿದ್ದರು. ಇವರು ಕ್ರಿ. ಶ. ೧೮೧೩ ರಲ್ಲಿ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಮದ್ರಾಸಿಗೆ ಸೇರಿದರು. ಮುಮ್ಮಡಿ ಕೃಷ್ಣರಾಜ ಒಡೆಯರವರಿಗೂ ಮದ್ರಾಸ್ ಸರ್ಕಾರಕ್ಕೂ ಮೈಸೂರುರಾಜ್ಯದ ಆಡಳಿತ ಶ್ರೇಷ್ಠತೆಯ ವಿಚಾರದಲ್ಲಿ ಸದಭಿಪ್ರಾಯಗಳೂ ನಂಬಿಕೆಯೂ ಬೆಳೆಯುವಂತೆ ಬಹಳ ಕೆಲಸ ಮಾಡಿದರು. ಕ್ರಿ. ಶ. ೧೮೧೫ ರಲ್ಲಿ ಮಹಾರಾಜರು ಈ ತಿರುಮಲರಾಯರಿಗೆ ಮೈಸೂರ್ ದಿವಾನ್ ಪದವಿಯನ್ನು ಕೊಟ್ಟು ಕರೆಯಿಸಿದರು. ಆದರೆ ದುರದೃಷ್ಟದಿಂದ ಇವರು ದಾರಿಯಲ್ಲಿಯೇ ವಿಷಪ್ರಾಶನದಿಂದ ಕೊಲ್ಲಲ್ಪಟ್ಟರು.

ಪ್ರಧಾನ ಸಹೋದರರ ವಂಶದವರು ಮದ್ರಾಸಿನಲ್ಲೂ, ಮೈಸೂರು ಪ್ರಾಂತದಲ್ಲೂ ನಮ್ಮ ಸಮುದಾಯದ ಕುಲವನ್ನು ಪ್ರಕಾಶಪಡಿಸಿದ್ದಾರೆ.

ಇದೇ ಶತಮಾನದ ಆದಿಯಲ್ಲಿ ನಮ್ಮ ಸಮುದಾಯದ ಮತ್ತೊಬ್ಬ ಸ್ವಾಮಿಗಳ ಪ್ರಾಬಲ್ಯ. ಇವರೇ ಶ್ರೀ|| ಉ|| ಜೋಸ್ಯಶಿಂಗ್ರ್ಯಾಚಾರ್ಯಸ್ವಾಮಿಗಳು ಮಹಾರಾಜರಿಂದ ಬಹುಮಂದಿ ಹಿರಿಯರಿಗೆ ವೃತ್ತಿಗಳನ್ನೂ ಗೌರವನ್ನೂ ಸಂಪಾದಿಸಿ ಕೊಟ್ಟರು. ನವಾಗ್ರಹಾರವನ್ನು (ಒಂಭತ್ತು ಮನೆಯ

ಅಗ್ರಹಾರ) ಮೈಸೂರಿನಲ್ಲಿ ನಮ್ಮವರಿಗಾಗಿ ರಾಜರಿಂದ ಕಟ್ಟಿಸಿ ಕೊಡಿಸಿ ಖ್ಯಾತಿಯನ್ನು ಗಳಿಸಿದರು. ಈ ಅಗ್ರಹಾರವು 'ಬುದ್ಧಿವಂತರ ತವರು ಮನೆ' ಎಂದು ಹೆಸರು ಪಡೆದಿದ್ದುದು ಅನೇಕರಿಗೆ ಜ್ಞಾಪಕವಿದೆ. ಇಲ್ಲಿ ವೈರಮುಡಿ ಮಂಟಪೋತ್ಸವನ್ನು ಏರ್ಪಡಿಸಿದವರಿವರು. ಇವರು ರಾಜರಿಂದ ಶ್ರೀಯದು ಗಿರಿಯ ಯತಿರಾಜ ಮಠಕ್ಕೆ ಅನೇಕ ನ್ಯಾಯುವಾದ ಸನ್ಮಾನಗಳನ್ನು ಗಳಿಸಲು ಯತ್ನಿಸಿದ್ದೂ, ಕಾರಣಾಂತರಗಳಿಂದ ಇದು ತಪ್ಪಿಹೋದದ್ದೂ ತಿಳಿದೇ ಇದೆ.

ಈ ಶತಮಾನದ ಮಧ್ಯ ಮತ್ತು ಅಂತ್ಯಭಾಗಗಳಲ್ಲಿ ಶ್ರೀ|| ಉ| ವಿದ್ವಾನ್ ನಾಟಂಪಳ್ಳಿ ಅನಂದಾಳ್ವಾರ್ ಸ್ವಾಮಿಗಳವರ (ಕ್ರಿ. ಶ. ೧೮೩೩ ೧೮೬೩) ಪಾಂಡಿತ್ಯವೂ, ಪ್ರತಿಭೆಯೂ ಜಗದ್ವಿಖ್ಯಾತವಾಗಿದ್ದುವು. "ವೇದಾಂತ ವಾದಾ ವಳೀ", "ನ್ಯಾಯಭಾಸ್ಕರ" ಇತ್ಯಾದಿ ಉದ್ಗ್ರಂಥಗಳನ್ನು ರಚಿಸಿದ ಮಹಾತ್ಮರಿವರು. ಕೌಶಿಕ ಗೋತ್ರದ ಶ್ರೀ|| ಉ|| ಮಹಾಭಾಷ್ಯಂ ಶಿಂಗ್ರಾ ಚಾರ್ಯ ಎಂಬ ವಿದ್ವದ್ವರೇಣ್ಯರ ಎರಡನೆಯ ಕುಮಾರರು. ಭಾರದ್ವಾಜ ಗೋತ್ರಕ್ಕೆ ಸ್ವೀಕೃತರಾದರು. ತಿರುನಾರಾಯಣ ಪುರದಲ್ಲಿ ವಾಸ. ಶ್ರೀ|| ಉ|| ಮಹಾಭಾಷ್ಯಂ ಶಿಂಗ್ರಾಚಾರ್ಯರೇ ನಾಟಂಪಳ್ಳಿ ಶಿಂಗ್ರಾಚಾರ್ಯಸ್ವಾಮಿಗಳು. ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸ್ಥಾನದಲ್ಲಿ ಅನನ್ತಾಳ್ವಾರ್ ಸ್ವಾಮಿಗಳಿಗೆ 'ಪಂಡಿತ ಮಂಡಲೀ ಸಾರ್ವಭೌಮ'ರೆಂಬ ಬಿರುದು ಪ್ರಖ್ಯಾತ ವಾಗಿತ್ತು. ವಾದದಲ್ಲಿ ಇವರನ್ನು ಗೆಲ್ಲುವ ಪಂಡಿತರಾರೂ ಇರಲಿಲ್ಲ. ಇವರ ಗ್ರಂಥಗಳ ಮಾಹಾತ್ಮ್ಯವೂ, ದಿವ್ಯತೇಜಃಪ್ರಭಾವವೂ, ಕಲ್ಯಾಣಗುಣಸಂಪ ತ್ತಿಯೂ, ಅನ್ಯಾದೃಶ ಪ್ರತಿಭಾ ವಿಶೇಷವೂ, ದಿಗ್ವಿಜಯ ವೈಭವವೂ ಸರ್ವರಿಗೂ ಚಿತ್ತಾಕರ್ಷಕವಾಗಿ ಇದ್ದುವು. ಇವರು ಶೇಷಾವತಾರ ರೂಪಿಗ ಳೆಂದು ಪಂಡಿತರೆಲ್ಲರೂ ಹೊಗಳುತ್ತಿದ್ದರು.

## ೧೯ ನೆಯ ಶತಮಾನದ ಉತ್ತರಾರ್ಧ ಮತ್ತು ೨೦ ನೆಯ ಶತಮಾನದ ಪೂರ್ವಾರ್ಧ

ಈ ಕಾಲವು ನಮ್ಮಲ್ಲಿ ಎಲ್ಲರಿಗೂ ತಕ್ಕಮಟ್ಟಿಗೆ ಜ್ಞಾಪಕದಲ್ಲಿರಬಹುದಾ ಗಿದೆ. ಈಚಿನ ಹಿರಿಯುರುಗಳನೇಕರ ಜೀವನದ ಚರಿತ್ರಾರ್ಹವಾದ ವಿಷಯಗಳು ಅನೇಕವಾಗಿವೆ, ಬಹಳ ವಿಸ್ತಾರವಾಗುವುದು. ಅಲ್ಲದೆ ಜ್ಞಾಪಕದ ತಪ್ಪಿನಿಂದ

ಆಕಸ್ಮಾತ್ತಾಗಿ ಕೆಲವು ಹಿರಿಯರ ಚರಿತ್ರೆಯ ವರದಿಯೂ ಬಿಟ್ಟುಹೋದಲ್ಲಿ ಬರೆವವನೂ ಓದುವವರೂ ವ್ಯಸನಪಡಬೇಕಾಗುವುದು. ಈ ಕಾಲದಲ್ಲಿ ಏನಿಲ್ಲವೆಂದರೂ ಐವತ್ತು, ಅರವತ್ತು ಮಹನೀಯರು, ಸ್ತ್ರೀಯರು, ಪುರುಷರು ಸಹ ನಮ್ಮ ಸಮುದಾಯದ ಹೆಸರನ್ನು ಖ್ಯಾತಿಗೊಳಿಸಿದ್ದಾರೆ. ಈ ಒಂದು ನೂರು ವರ್ಷಗಳಲ್ಲಿ ಸುಮಾರಿನ ತಲೆಮಾರಿನ ಪರಿಚಯಪಡಿಸಿರುವ ಹಿರಿಯ ಮಹನೀಯರ ವಿಸ್ತಾರವಾದ ವಿಷಯಗಳನ್ನು ಅವರವರ ಕುಟುಂಬದವರು ದಯೆಯಿಟ್ಟು ಬರೆದು ಕಳುಹಿಸಿದರೆ ಮಹೋಪಕಾರವಾಗುವುದು. ಮುಂದಣವರ ಉಪಯೋಗಕ್ಕಾಗಿ ಬರೆದು ಪ್ರಚಾರಮಾಡುವುದು ಶ್ರೇಯಸ್ಕರವೂ ಆಗಿರುವುದು.

# ಪ್ರಕರಣ ೬

## ಶ್ರೀಯದುಗಿರಿ ಯತಿರಾಜ ಮಠದ ಸ್ವಾಮಿಗಳು

ಶ್ರೀಯದುಗಿರಿ ಯತಿರಾಜಮಠದ ಪೀಠವನ್ನು ಬಹುಕಾಲದಿಂದ ನಮ್ಮ ಸಮುದಾಯದವರೇ ಅಲಂಕರಿಸಿದ್ದರು. ಮಠದ ಆಡಳಿತಗಳು ನಮ್ಮ ಮಹಾಜನಗಳ ಕೈಯಲ್ಲೇ ನಡೆದುಬಂದಿದೆ.

ಶ್ರೀರಾಮಾನುಜಾಚಾರ್ಯರು ಈ ಮಠವನ್ನು ಸ್ಥಾಪಿಸಿ ತಾವೇ ಸಾಕ್ಷಾತ್ತಾಗಿ ಈ ದಿವ್ಯಪೀಠವನ್ನು ಅಲಂಕರಿಸಿ ಅನುಗ್ರಹಿಸಿದ್ದು ಲೋಕವಿಖ್ಯಾತವಾಗಿದೆ. ಅಂದಿನಿಂದ ಇಂದಿನವರೆಗೆ ಈ ಮಠದ ಜೀಯರ್‌ಸ್ವಾಮಿಗಳವರ ಪರಂಪರೆಯೂ, ಅವರವರ ಸರಿಯಾದ ಕಾಲಗಳೂ, ತನಿಯರ್ಗಳೂ, ಆಯಾ ಸ್ವಾಮಿಗಳು ಮಾಡಿದ್ದ ಕಾರ್ಯಗಳೂ ಬರೆದಿರುವ ಗ್ರಂಥಗಳೂ ಯಾವುದೊಂದೂ ದೊರೆಯದೆ ಇರುವುದು ಬಹಳ ಶೋಚನೀಯವಾಗಿದೆ.

ಶ್ರೀ ಮಠದ ಸ್ವಾಮಿಗಳ ಭಾವಚಿತ್ರಗಳು ಕೆಲವು ದೊರೆಯುತ್ತವೆ. ಇವುಗಳನ್ನು ಸಂಗ್ರಹಿಸಿ ವಿಶಾಲಪಡಿಸಿ, ಕಾಲ ಮತ್ತು ತನಿಯರ್ಗಳೊಡನೆ ಶ್ರೀ ಮಠದಲ್ಲಿ ದರ್ಶನಕ್ಕಾಗಿ ಏರ್ಪಡಿಸುವ ಪವಿತ್ರ ಕಾರ್ಯವನ್ನು ಶ್ರೀ ಮಠವು ಕೈಕೊಳ್ಳಬೇಕಾಗಿದೆ.

ಶ್ರೀರಾಮಾನುಜಾಚಾರ್ಯರಿಂದ ಈಚೆಗೆ ಆ ತರುಣದಲ್ಲಿ (೧) ಶ್ರೀ || ಉ|| ದೇಶಾದ್ರಿಕೇಳ್ವಿ ತಿರುನಾರಾಯಣ ರಾಮಾನುಜಜೀಯರ್ ಸ್ವಾಮಿಗಳು (೨) ಶ್ರೀ || ಉ || ತಿರುನಾರಾಯಣ ಜೀಯರ್‌ಸ್ವಾಮಿಗಳು (ಕ್ರಿ. ಶ. ೧೨೦೮). (೩) ಶ್ರೀ|| ಉ|| ಯತಿರಾಜ ಜೀಯರ್‌ಸ್ವಾಮಿಗಳು, (೪) ಶ್ರೀ|| ಉ|| ಯದುಗಿರಿ ನಾರಾಯಣಜೀಯರ್ ಸ್ವಾಮಿಗಳು (ಕ್ರಿ. ಶ. ೧೪೫೮) ಈ ತಿರುನಾಮಗಳುಮಾತ್ರ ತಿಳಿದಿವೆ ಇನ್ನು ಕೆಲವು ತನಿಯರ್ಗಳು ದೊರೆ ತಿರುವುವು.. ಯಾವ ಸ್ವಾಮಿಗಳೆಂಬುದು ಗೊತ್ತಾಗಿಲ್ಲ.

ಕೆಲವು ಜೀಯರ್ ಸ್ವಾಮಿಗಳ ವಿಷಯವಾಗಿ ತಿಳಿದುಬಂದ ಬಿಡುವಾದ ಅಂಶಗಳನ್ನು ಈ ಕೆಳಗೆ ನಿರೂಪಿಸಿದೆ.

## ಶ್ರೀ|| ಉ|| ದೇಶಾದ್ರಿ ಕೇಳ್ವಿ ತಿರುನಾರಾಯಣ ರಾಮಾನುಜ ಜೀಯರ್ ಸ್ವಾಮಿಗಳು

ಶ್ರೀರಾಮಾನುಜಾಚಾರ್ಯರವರು ಮೇಲು ಕೋಟೆಗೆ ಶಾಲೀವಾಹನ ಶಕ ೧೦೨೦ ಕಳೆದ ಬಹುಧಾನ್ಯ ಸಂವತ್ಸರದ ಪುಷ್ಯಶುದ್ಧ ೧೪ ಗುರುವಾರ ಪುನರ್ವಸೂ ನಕ್ಷತ್ರದಲ್ಲಿ ಬಿಜಯಮಾಡಿ, ಹುತ್ತವನ್ನು ಕರಗಿಸಿ, ಶ್ರೀ ನಾರಾಯಣಸ್ವಾಮಿಯವರನ್ನು ದರ್ಶನಮಾಡಿ ತಿರುನಾರಾಯಣಪುರವನ್ನು ಸ್ಥಾಪಿಸಿದ್ದು ಲೋಕವಿಖ್ಯಾತವಾದ ವಿಷಯ. ಶ್ರೀ ರಾಮಾನುಜಾಚಾರ್ಯರವರು ಶ್ರೀ ಯದುಗಿರಿ ಯತಿರಾಜಮಠವನ್ನು ಕಟ್ಟಿಸಿ ಶ್ರೀ ಪೀಠವನ್ನು ಅಲಂಕರಿಸಿದ್ದು ಶ್ರೀ ರಂಗನಾಥಸ್ವಾಮಿಯ ಆಜ್ಞೆಯಂತೆ ಶ್ರೀರಂಗಕ್ಕೆತಿರುಗಿ ಬಿಜಯಮಾಡುತ್ತಿರುವಾಗ, ಶ್ರೀ ಮಠದ ಆಶ್ರಮಪಟ್ಟವನ್ನು ದೇವಸ್ಥಾನಗಳ ವಿಚಾರಣೆಯಲ್ಲಿದ್ದ ಶ್ರೀ' ಉ|| ದೇಶಾದ್ರಿಕೇಳ್ವಿ ತಿರುನಾರಾಯಣ ಜೀಯರ್ ಸ್ವಾಮಿಗಳಿಗೆ ವಹಿಸಿದರು. ಅಲ್ಲದೆ "ಐವತ್ತಿಬ್ಬರು'' ಶಿಷ್ಯರಿಗೂ ಕರ್ತವ್ಯಗಳನ್ನೂ ಏರ್ಪಡಿಸಿದರು. ಶ್ರೀರಾಮಾನುಜ ಮುದ್ರೆ ಉಂಗರವನ್ನು ಅನುಗ್ರಹಿಸಿ ದೇವಸ್ಥಾನಗಳ ಸಕಲ ಮರ್ಯಾದೆಗಳನ್ನೂ, ಕಾರ್ಯಭಾರವನ್ನೂ ಶ್ರೀ||ಉ|| ತಿರುನಾರಾಯಣ ಜೀಯರ್‌ಸ್ವಾಮಿಗಳಿಗೆ ವಹಿಸಿದರು. ಈ ಸ್ವಾಮಿಗಳು ಸುಮಾರು ೩೭ ವರ್ಷಗಳ ಕಾಲ ಆಶ್ರಮವನ್ನು ಅಲಂಕರಿಸಿ, ಶ್ರೀ ತಿರುನಾರಾಯಣ

ಸ್ವಾಮಿಯ ಸಕಲವಿಧ ಕೈಂಕರ್ಯಗಳನ್ನೂ ನಡೆಯಿಸಿಕೊಂಡು ಬಂದರು. ತಮಗೆ ಪರಮಪದಕಾಲ ಪ್ರಾಪ್ತಿಯಾದುದನ್ನು ತಿಳಿದು, ತಮ್ಮ ಶಿಷ್ಯರಾದ ಶ್ರೀ||ಉ|| ತಿರುನಾರಾಯಣಜೀಯರ್ ಸ್ವಾಮಿಗಳಿಗೆ ಪಟ್ಟವನ್ನು ಕೊಟ್ಟು, ರಾಮಾನುಜ ಮುದ್ರೆ ಉಂಗರವನ್ನು ಅನುಗ್ರಹಿಸಿ ಸಿದ್ಧಾರ್ಥಿಸಂವತ್ಸರದ (ಕ್ರಿ. ಶ. ೧೧೩೯) ಚೈತ್ರಬಹುಳದಲ್ಲಿ ಪರಮಪದಿಸಿದರು.

## ಶ್ರೀ|| ಉ|| ತಿರುನಾರಾಯಣ ಜೀಯರ್ ಸ್ವಾಮಿಗಳು

ಶ್ರೀ|| ಉ|| ತಿರುನಾರಾಯಣ ಜೀಯರ್ ಸ್ವಾಮಿಗಳು ಶ್ರೀ ಮಠದ ಪೀಠವನ್ನಲಂಕರಿಸಿ ದೇವಸ್ಥಾನಗಳ ಸಕಲ ಕೈಂಕರ್ಯಗಳನ್ನೂ ಸುಮಾರು ೪೮ ವರುಷಗಳಕಾಲ ನಿರ್ವಹಿಸಿ ತಮ್ಮ ಶಿಷ್ಯರಾದ ಶ್ರೀ|| ಉ|| ಶ್ರೀಯತಿರಾಜ ಜೀಯರ್ ಸ್ವಾಮಿಗಳಿಗೆ ಪಟ್ಟವನ್ನು ಕಟ್ಟಿ ಶಾ. ಶಕ. ೧೧೦೯ ಪ್ರಭವ ಸಂವತ್ಸರ (ಕ್ರಿ. ಶ. ೧೧೮೭) ಪುಷ್ಯಶುದ್ಧ ಪ್ರಥಮಾತಿಥಿಯಲ್ಲಿ ಪರಮಪದವನ್ನೈದಿದರು. ಇವರ ಕಾಲದಲ್ಲಿ (ಕ್ರಿ. ಶ. ೧೧೫೫ ರಲ್ಲಿ) ಯಾದವನಾರಾಯಣ ಚತುರ್ವೇದಮಂಗಲದ ಮಹಾಜನಗಳು ತಿರುನಾರಾಯಣ ಸ್ವಾಮಿಗೆ ನರಸಿಂಹದೇವರಾಯನ ಆಳಿಕೆಯಲ್ಲಿ ಕೆಲವು ಗ್ರಾಮ ಭೂಮಿಗಳನ್ನು ಕೊಟ್ಟು ಶಿಲಾಶಾಸನವನ್ನು ಸ್ಥಾಪಿಸಿದರು.

## ಶ್ರೀ|| ಉ|| ಯತಿರಾಜ ಜೀಯರ್ ಸ್ವಾಮಿಗಳು

ಈ ಜೀಯರ್ ಸ್ವಾಮಿಗಳು ಶ್ರೀ ತಿರುನಾರಾಯಣ ಸ್ವಾಮಿಯವರ ದಿವ್ಯ ಕೈಂಕರ್ಯಗಳನ್ನು ಸುಮಾರು ೩೫ ವರುಷಗಳಕಾಲ ನಡೆಯಿಸಿ ಶ್ರೀ ಯದುಗಿರಿ ನಾರಾಯಣ ಜೀಯರ್ ಸ್ವಾಮಿಗಳವರಿಗೆ ಶ್ರೀ ಮಠದ ಪಟ್ಟವನ್ನು ಅನುಗ್ರಹಿಸಿ ತಾವು ಪರಮಪದಿಸಿದರು. ಇವರ ಕಾಲದಲ್ಲಿ ತಿರುನಾರಾಯಣಸ್ವಾಮಿಗೆ ಭೂದಾನವನ್ನು ಪಡೆದ ಶಾಸನವಿದೆ.

## ಶ್ರೀ|| ಉ|| ಯದುಗಿರಿ ನಾರಾಯಣ ಜೀಯರ್ ಸ್ವಾಮಿಗಳು

ಈ ಸ್ವಾಮಿಗಳವರು ಎಷ್ಟು ವರ್ಷಗಳು ಪೀಠವನ್ನು ಅಲಂಕರಿಸಿದ್ದರೋ ತಿಳಿಯದು. ಇಲ್ಲಿಂದ ಮುಂದೆ ಸುಮಾರು ಮೂರು ಶತಮಾನಗಳ ಅಂತರದ ಪಟ್ಟಗಳ ವಿವರವು ಸರಿಯಾಗಿ ದೊರೆತಿಲ್ಲ.

## ಶ್ರೀ|| ಉ|| ರಾಮಾನುಜಜೀಯರ್ ಸ್ವಾಮಿಗಳು
## (ಶಾ. ಶ. ೧೩೮೦, ಕ್ರಿ. ಶ. ೧೪೫೮)

ಶಾ. ಶ. ೧೩೮೦, ಕ್ರಿ. ಶ. ೧೪೫೮ ರಲ್ಲಿ ನಾಗಮಂಗಳಾಧಿಪತಿ ತಿಮ್ಮಣ್ಣ ದಂಡನಾಯಕರು ಮೇಲುಕೋಟೆಯನ್ನು ಜೀರ್ಣೋದ್ಧಾರ ಮಾಡಿ, ರಾಮಾನುಜಕೂಟವನ್ನು ಸ್ಥಾಪಿಸಿ ಈ ರಾಮಾನುಜ ಜೀಯರ್ ಸ್ವಾಮಿಗಳಿಗೆ ಸರ್ವಸ್ವಾಮ್ಯವನ್ನು ವಹಿಸಿ ಕೊಟ್ಟರೆಂದು ಶ್ರೀರಂಗಪಟ್ಟಣದ ತಾಲ್ಲೂಕು ೮೯ನೆಯ ನಂಬರು ಶಾಸನದಿಂದ ತಿಳಿಯಬರುತ್ತದೆ.

## ಶ್ರೀ|| ಉ|| ವೇದಾನ್ತಿ ರಾಮಾನುಜ ಮುನಿಗಳು

ಶ್ರೀ|| ಉ|| ವೇದಾನ್ತಿ ರಾಮಾನುಜ ಮುನಿಗಳು ತಮ್ಮ ಶಿಷ್ಯರಾದ ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳ ಸಂಗಡ ಬಂದು, ಮೂರು ಮಕ್ಕಳನ್ನು ಬಿಟ್ಟು ಕ್ರಿ. ಶ. ೧೬ನೇ ಶತಮಾನದಲ್ಲಿ ಪೀಠವನ್ನಲಂಕರಿಸಿ ಶಿಷ್ಯವರ್ಗವನ್ನು ಅನುಗ್ರಹಿಸಿದರು. ಇವರು ಲೋಹಿತ ಗೋತ್ರದವರು. ವೃಷಭ ಮಾಸ ಪುಷ್ಯನಕ್ಷತ್ರದಲ್ಲಿ ಜನನ. ಇವರು ರಾಮಾನುಜಪುರದಲ್ಲಿ ನಮ್ಮವರ ಕೂಟಕ್ಕೆ ಸೇರಿದವರೆಂಬುದನ್ನು ಹಿಂದೆಯೇ ನಿರೂಪಿಸಿದೆ. ಹಿರಿಯ ವಿದ್ವಾಂಸರು. ಇವರಿಗೆ ವಿಜಯನಗದ ರಾಜರೂ ನಂದ್ಯಾಲದ ಅರಸುಗಳೂ ತಿರುನಾರಾಯಣಪುರದ ದೇವಸ್ಥಾನಗಳ ಸಕಲವಾದ ಮರ್ಯಾದೆಗಳನ್ನೂ ಅಧಿಕಾರಗಳನ್ನೂ ಕೊಟ್ಟಿದ್ದರು. ದೇವರ ಕೈಂಕರ್ಯ ಮತ್ತು ರಾಮಾನುಜ ಕೂಟವನ್ನು ನಡೆಯಿಸುವುದಕ್ಕಾಗಿ ೧೩೦೦ ವರಹಗಳ ಉತ್ಪತ್ತಿಯುಳ್ಳ ಗ್ರಾಮಗಳನ್ನು ಕೊಟ್ಟು ಶಾ ಶ. ೧೪೭೭ ರಲ್ಲಿ (ಕ್ರಿ. ಶ. ೧೫೫೫) ಶಿಲಾಶಾಸನವನ್ನು ಹಾಕಿರುವರು. ಈ ಶಾಸನವು ತಿರುನಾರಾಯಣಪುರದ ಶ್ರೀ ನಾರಾಯಣಸ್ವಾಮಿಯವರ ದೇವಸ್ಥಾನದ ರಂಗಮಂಟಪದ ದಕ್ಷಿಣದ ಕಡೆ ಹೊರ ಭಿತ್ತಿಯಲ್ಲಿದೆ. ಶ್ರೀ|| ಉ|| ಕನ್ದಾಡೈ ಅಣ್ಣನವರ ವಂಶಸ್ಥರಾದ **ಶ್ರೀ|| ಉ|| ವಾಧೂಲ ವರದಾಚಾರ್ಯರು** ಶ್ರೀ|| ಉ|| ವೇದಾನ್ತಿ ರಾಮಾನುಜ **ಜೀಯರ್ ಸ್ವಾಮಿಗಳಿಗೆ ಆಚಾರ್ಯರೆಂದು ಪ್ರತೀತಿ.**

**ಈ ಸ್ವಾಮಿಗಳ ತನಿಯನ್ :—**

ಶ್ರೀ ಮಲ್ಲಕ್ಷ್ಮಣ ಯೋಗೀನ್ದ್ರ, ವಾಧೂಲ ವರದಾರ್ಯಯೋಃ |
ಕೃಪಾಸುಪಾತ್ರಂ ವೇದಾನ್ತಿ ರಾಮಾನುಜಮುನಿಂ ಭಜೇ ||

ರಾಮಾನುಜಪುರದ ಪ್ರತಿಷ್ಠಾಪಕರಾದ ಶ್ರೀ|| ಉ|| ಅಪ್ಪಯಾಚಾರ್ಯರಿಗೆ ಶ್ರೀ|| ಉ|| ವೇದಾನ್ತ ರಾಮಾನುಜಮುನಿಗಳು ವಿದ್ಯಾಗುರುಗಳೆಂದು ಹಿಂದೆಯೇ ನಿರೂಪಿತವಾಗಿದೆ.

ಇಲ್ಲಿಂದ ಮುಂದೆಯೂ ಸುಮಾರು ಮೂರು ಶತಮಾನಗಳ ಅಂತರದ ಪಟ್ಟಗಳ ವಿವರವು ಸರಿಯಾಗಿ ದೊರೆತಿಲ್ಲ. ಶ್ರೀ|| ಉ|| ವೇದಾನ್ತ ರಾಮಾನುಜಮುನಿಗಳಿಂದೀಚೆಗೆ ಆರು ಪೀಠಗಳು ಮುಂಡಯಂ ಶ್ರೀ ವೈಷ್ಣವ ಮಹಾಜನಗಳಿಂದ ಅಲಂಕರಿಸಲ್ಪಟ್ಟಿತ್ತೆಂದು ಪರಂಪರೆಯಾಗಿ ತಿಳಿದುಬಂದಿದೆ.

## ಶ್ರೀ|| ಉ|| ಕುಣಿಗಲ್ ಸ್ವಾಮಿಗಳು (ಬಹುಕುಟುಂಬಿ ಸ್ವಾಮಿಗಳು)

ಈ ಸ್ವಾಮಿಗಳು ತಿರುನಾರಾಯಣಪುರದಲ್ಲಿ ಪರಮಪದಿಸಿದ್ದು ಶಾ. ಶ. ೧೭೪೫ (ಕ್ರಿ. ಶ. ೧೮೨೩) ಚಿತ್ರಭಾನು ಸಂವತ್ಸರವೆಂದು ಮಾತ್ರ ತಿಳಿದಿದೆ. ಈ ಸ್ವಾಮಿಗಳ ಬೃಂದಾವನವು ತಿರುನಾರಾಯಣಪುರದಲ್ಲಿದೆ.

### ಈ ಸ್ವಾಮಿಗಳ ತನಿಯನ್:—

ಶ್ರೀ ಸಂಪತ್ಸುತ ಸಂಯಮೀನ್ದ್ರ ಚರಣ ದ್ವಂದ್ವಾಶ್ರಯಂ ಸದ್ಗುಣಂ |
ಶ್ರೀಮನ್ತಂ ಗುರು ಸಾರ್ವಭೌಮ ಮನಘಂ ವೇದಾನ್ತ ಯುಗ್ಮಾರ್ಥದಂ||
ಶ್ರೀಮದ್ಯಾದವ ಶೈಲ ನಾಥಯತಿರಾಟ್ ಕೈಂಕರ್ಯನಿಷ್ಠಂ ಸದಾ |
ಶ್ರೀ ನಾರಾಯಣ ಸಂಯಮೀನ್ದ್ರ ಮತುಲೋದಾರಸ್ವಭಾವಂ ಭಜೇ ||

## ಶ್ರೀ|| ಉ|| ತೊಂಡನೂರು ಪ್ರತಿವಾದಿ ಭಯಂಕರಂ ಶಿಂಗ್ರೈಯ್ಯಂಗಾರ್ ಸ್ವಾಮಿಗಳು

ಶ್ರೀ|| ಉ|| ಬಹುಕುಟುಂಬಿ ಸ್ವಾಮಿಗಳ ಅನಂತರ ಶ್ರೀ ಪೀಠವನ್ನಲಂಕರಿಸಿ ಸುಮಾರು ೧೮ ವರ್ಷಗಳಕಾಲ ಕೈಂಕರ್ಯಗಳನ್ನು ನಡೆಸಿದರು. ಜನನ ಕನ್ಯಾಮಾಸ ಸ್ವಾತಿನಕ್ಷತ್ರ. ಇವರು ಶಾ. ಶ. ೧೭೪೫ರಲ್ಲಿ ಆಶ್ರಮಪಟ್ಟವನ್ನು ಅಂಗೀಕರಿಸಿದರು. ಶ್ರೀ ಸ್ವಾಮಿಗಳವರು ತಮಗೆ ಪರಮಪದಿಸುವ ಕಾಲವು ಸನ್ನಿಹಿತವಾದುದನ್ನು ಅರಿತು, ತಮ್ಮ ಉತ್ತರಾಧಿಕಾರಿಯಾಗಿ ಶ್ರೀ|| ಉ|| ಅನನ್ತಾಳ್ವಾರ್ ಸ್ವಾಮಿಗಳವರಿಗೆ ತ್ರಿದಂಡ ಕಾಷಾಯಾದಿ

ಗಳನ್ನು ೧೯-೧೨-೧೮೯೯ ರಲ್ಲಿ, ವಿಕಾರಿಸಂವತ್ಸರ ಮಾರ್ಗಶಿರ ಚತುರ್ದಶಿಯ ದಿನ, ಅನುಗ್ರಹಿಸಿ ಮಾರನೆಯದಿನ ಪೌರ್ಣಮಾತಿಥಿಯಲ್ಲಿ ತಿರುನಾರಾಯಣ ಪುರದಲ್ಲಿ ಪರಮಪದಿಸಿದರು.

**ಇವರ ತನಿಯನ್ :—**

*ಶೌರ್ಯ ವೇಂಕಟ ಯತೀಂದ್ರ ಪದಾಬ್ಜ ಹಂಸಂ ।
ಶ್ರೀಶೈಲ ಶೇಷವರದಾರ್ಯದಯಾತ್ತ ಬೋಧಂ ॥
ಶ್ರೀವಾದಿ ಭೀಕರ ಯದುಕ್ಷಿತಿಭೃದ್ಯತೀಂದ್ರ ।
ಸಂಪತ್ಕುಮಾರ ಮುನಿವರ್ಯಮಹಂ ಪ್ರಪದ್ಯೇ ॥
ಕನ್ಯಾಯಾಂ ಸ್ವಾತಿ ಸಂಜಾತಂ ವಾದಿಭೀಕೃತ್ಕುಲೋದ್ಭವಂ ।
ಸುಶೀಲಂ ಸದ್ಗುರುಂ ವಂದೇ ಸಂಪತ್ಪುತ್ರಮುನಿಂ ಸದಾ ॥

## ಶ್ರೀ॥ ಉ॥ ತಿಟ್ಟುಮೇಲ್ ಅನನ್ತಾಳ್ವಾರ್ ಸ್ವಾಮಿಗಳು

ಇವರು ಮಾಶಿಮಾಸ ಚಿತ್ತಾನಕ್ಷತ್ರದಲ್ಲಿ ಜನಿಸಿದರು. ಆಶ್ರಮ ಸ್ವೀಕಾರ ೧೯-೧೨-೧೮೯೯. ಇವರಿಗೆ ನಾರಾಯಣ ಪಟ್ಟತಿರುನಾಮ. ಇವರು ಕ್ರಿ. ಶ. ೧೯೧೦ನೇ ಸೌಮ್ಯಸಂವತ್ಸರದಲ್ಲಿ ಪರಮಪದಿಸಿದರು.

**ಇವರ ತನಿಯನ್ :—**

ಸಂಪತ್ಸುತಸ್ಯ ಯಮಿನಃ ಪದಪಂಕಜಾಳಿಂ ।
ಸಂಪತ್ಕುಮಾರ ಮುನಿವರ್ಯ ಕೃಪಾತ್ತಬೋಧಂ ।
ತಲ್ಲಬ್ಧ ವೇದಯುಗಳಂ ಯದುಭೂಧರಶ್ರೀ ।
ನಾರಾಯಣಂ ಮುನಿವರಂ ಸತತಂ ಭಜೇಹಂ ॥

## ಶ್ರೀ॥ ಉ॥ ಛಾಂದೋಗ್ಯಂ ಕುಪ್ಪನ್ನೈಯ್ಯಂಗಾರ್ ಸ್ವಾಮಿಗಳು (ದೊಡ್ಡ ಸ್ವಾಮಿಗಳು)

ಇವರು ಕರ್ಕಾಟಕಮಾಸ ಕೃತ್ತಿಕಾನಕ್ಷತ್ರದಲ್ಲಿ ಜನಿಸಿದರು. ಇವರಿಗೆ ಸಂಪತ್ಕುಮಾರ ಪಟ್ಟತಿರುನಾಮವು. ಇವರು ತಾವು ಪೀಠವನ್ನಲಂಕ

---

* ಪಾಠಾಂತರ — ಶೇಷಾರ್ಯ.

ಒಪ್ಪಾಗಲೇ ಶ್ರೀ|| ಉ|| ನಾಟೇರಿ ವರದಾಚಾರ್ಯಸ್ವಾಮಿಗಳವರಿಗೆ ಶಾ. ಶ. ೧೭೭೭ ರಲ್ಲಿ (ಕ್ರಿ. ಶ. ೧೮೫೫) ಆಶ್ರಮವನ್ನು ಕೊಟ್ಟು ಮೂರು ವರ್ಷಗಳ ಅನಂತರ ಉತ್ತರ ದೇಶದ ಯಾತ್ರೆಗೆ ಕಳುಹಿಸಿದ್ದರು.

ಶ್ರೀ|| ಉ|| ಕುಪ್ಪನ್ಸೈಯ್ಯಂಗಾರ್ ಸ್ವಾಮಿಗಳವರು ಕಿ. ಶ. ೧೮೫೮ ರಲ್ಲಿ ಪರಮಪದಿಸಿದರು. ಆಗ ಶ್ರೀ|| ಉ|| ನಾಟೇರಿಸ್ವಾಮಿಗಳವರು ಉತ್ತರ ದೇಶದ ಯಾತ್ರೆಯಲ್ಲೇ ಇದ್ದರು.

**ಇವರ ತನಿಯನ್ :—**

ಶ್ರೀ ವೆಂಕಟೇಶ ಕರುಣಾ ಪರಿಣಾಮಪಾತ್ರಂ |
ಶ್ರೀಮಚ್ಛಠಾರಿ ಪದಪಂಕಜ ರಾಜಹಂಸಂ |
ಶ್ರೀಯಾದವಾದ್ರಿ ಯತಿರಾಜ ದಯೈಕಪಾತ್ರಂ |
ಸಂಪತ್ಕುಮಾರ ಮುನಿವರ್ಯಮಹಂ ಪ್ರಪದ್ಯೇ ||

## ಶ್ರೀ|| ಉ|| ನಾಟೇರಿ ವರದಾಚಾರ್ಯ ಸ್ವಾಮಿಗಳು

ಇವರು ಕಾಂಚೀನಗರದ ನಾಟೇರಿ ಗ್ರಾಮಕ್ಕೆ ಸೇರಿದವರು. ಕುಂಭ ಮಾಸ ರೇವತೀ ನಕ್ಷತ್ರದಲ್ಲಿ ಜನನ. ಘನ ವಿದ್ವಾಂಸರು. ತಿರುನಾರಾಯಣ ಪುರಕ್ಕೆ ತಮ್ಮ ತಮ್ಮಂದಿರು ಶ್ರೀ ರಾಮಾನುಜಾಚಾರ್ಯರೆಂಬುವರೊಡನೆ ದಯಮಾಡಿಸಿ, ಅಲ್ಲಿಯೇ ಶ್ರೀಮಠದ ಜೀಯರ್ ಸ್ವಾಮಿಗಳಾದ ಶ್ರೀ|| ಉ|| ಕುಪ್ಪನ್ಸೈಯ್ಯಂಗಾರ್ ಸ್ವಾಮಿಗಳನಂತರ ಮಠದ ಪೀಠವನ್ನು ಅಲಂಕರಿಸಿದರು. ಉತ್ತರದೇಶದಲ್ಲಿ ಬಹಳ ಗೌರವವನ್ನು ಸಂಪಾದಿಸಿ ಜಯಪುರ, ಬಿಕನೀರ್, ಬರೋಡಾ, ದರ್ಭಂಗ ಮುಂತಾದ ರಾಜಾಸ್ಥಾನಗಳಲ್ಲಿ ಸನ್ಮಾನಿತರಾಗಿ ಬದರಿಕಾಶ್ರಮ ಮುಂತಾದ ಯಾತ್ರೆಗಳನ್ನು ವೈಭವದಿಂದ ನಡೆಸಿ, ಅನೇಕ ಶಿಷ್ಯರನ್ನು ಶ್ರೀ ಮಠಕ್ಕೆ ಸೇರಿಸಿದರು. ಶಾ. ಶ. ೧೭೮೧ ರಲ್ಲಿ ರೀವಾ ಮಹಾರಾಜರಿಂದ ಆಹ್ವಾನಿತರಾಗಿ ಗೋವಿಂದಘಡಕ್ಕೆ ದಯಮಾಡಿಸಿದರು. ರೀವಾಮಹಾರಾಜರ ಕೋರಿಕೆಯಂತೆ ತಾವು ಗೋವಿಂದಘಡದಲ್ಲಿಯೇ ಉಪದೇಶವನ್ನು ಅನುಗ್ರಹಿಸುತ್ತ ನಿಂತರು. ಶ್ರೀ|| ಕುಪ್ಪನ್ಸೈಯ್ಯಂಗಾರ್ಯಸ್ವಾಮಿ

ಗಳು ಪರಮಪದಿಸಲು ಮೂಲಮಠದಲ್ಲಿ ಪೀಠಕ್ಕೆ ಒಬ್ಬರಾದನೇಲೊಬ್ಬರು ಸ್ವಾಮಿಗಳಿಗೆ ಪಟ್ಟವನ್ನು ಕಟ್ಟಿಸಿದರು.

ರೀವಾ ಮಹಾರಾಜರಾದ ರಘುರಾಜ ಸಿಂಹನಿಗೆ **ಶ್ರೀ|| ಉ|| ವರದಾಚಾರ್ಯ ಸ್ವಾಮಿಗಳವರ** ಮಂತ್ರೋಪದೇಶ ಬಲದಿಂದ ಸುಪುತ್ರಸಂತಾನವಾಗಿ ಗುರುಗಳವರ ಉಪದೇಶದಂತೆ ಮಗುವಿಗೆ ವೆಂಕಟರಮಣಸಿಂಗ್ ಎಂಬುದಾಗಿ ನಾಮಕರಣವಾಯಿತು. ಗೋವಿಂದಘಡದಲ್ಲಿ ರಾಜರು ಒಂದು ಯತಿರಾಜಮಠವನ್ನು ಕಟ್ಟಿಸಿ ಸ್ವಾಮಿಗಳಿಗೆ ವಹಿಸಿ, ಅನೇಕ ದ್ರವ್ಯ, ಗ್ರಾಮ, ಇತ್ಯಾದಿಗಳನ್ನು ಕೊಟ್ಟಿದ್ದಲ್ಲದೆ, ನಿರಂತರವಾಗಿ ದ್ರವ್ಯ ಸಹಾಯವಾಗುವಂತೆಯೂ ಕಟ್ಟಳೆಯನ್ನು ಏರ್ಪಡಿಸಿದ್ದರು. ಶ್ರೀ ಸ್ವಾಮಿಗಳವರು ಗೋವಿಂದಘಡದಲ್ಲಿಯೇ ೧–೯–೧೮೯೦ ರಲ್ಲಿ ಪರಮಪದಿಸಿದರು. ವಿಕೃತಿ ಸಂವತ್ಸರ, ಸಿಂಹಕೃಷ್ಣ ತೃತೀಯಾ ತಿಥಿ.

ಈಗಲೂ ಕಾರಣಾಂತರಗಳಿಂದ ಶ್ರೀ|| ಉ|| ವರದಾಚಾರ್ಯ ಸ್ವಾಮಿಗಳವರು ಗೋವಿಂದಘಡದ ಮಠದಲ್ಲಿ ಆರಾಧನೆಯಲ್ಲಿಟ್ಟುಕೊಂಡಿದ್ದ ಮೂರ್ತಿಗಳೂ ದ್ರಾವಿಡಾಕ್ಷರ ಕೆಲವು ಓಲೆ ಪುಸ್ತಕಗಳೂ, ಕೆಲವು ಬೆಳ್ಳಿಯ ಪಾತ್ರೆಗಳೂ ಆ ಮಠದಲ್ಲಿಯೇ ನಿಂತುಹೋಗಿವೆ. ನಮ್ಮ ಮೂಲ ಮಠದಿಂದ ಸಕಾಲದಲ್ಲಿ ಸರಿಯಾದವರು ಗೋವಿಂದಘಡಕ್ಕೆ ಹೋಗದೆ ಇದ್ದುದು ಇದಕ್ಕೆ ಮುಖ್ಯ ಕಾರಣಗಳಲ್ಲೊಂದಾಗಿದೆ. ಶಾಖಾ ಮಠದ ಆಡಳಿತವು ಮೂಲ ಮಠಕ್ಕೆ ತಪ್ಪಿಹೋಯಿತು.

## ಶ್ರೀ|| ಉ|| ಕೃಷ್ಣಯ್ಯಂಗಾರ್ ವೆಂಕಟಾಚಾರ್ಯ ಸ್ವಾಮಿಗಳು
(ಮುದಿಗುಂಬಂ ಸ್ವಾಮಿಗಳು)

ಈ ಮಹನೀಯರು ಶಾ. ಶ. ೧೭೩೭ (ಕ್ರಿ. ಶ. ೧೮೧೪) ಭಾವ ಸಂವತ್ಸರದ ಮಿಥುನ ಮಾಸ ಭರಣಿ ನಕ್ಷತ್ರದಲ್ಲಿ ಜನಿಸಿದರು. ಗೋವಿಂದಘಡದಲ್ಲಿದ್ದ ಶ್ರೀ|| ಉ|| ನಾಟೇರಿ ವರದಾಚಾರ್ಯ ಸ್ವಾಮಿಗಳ ನಿಯಮನದಿಂದ ಮೂಲ ಮಠದಲ್ಲಿ ಕ್ರಿ. ಶ. ೧೮೬೭ ರಲ್ಲಿ ಆಶ್ರಮ ಸ್ವೀಕಾರ. ಇವರಿಗೆ ಸಂಪತ್ಕುಮಾರ ಪಟ್ಟ ತಿರುನಾಮವು. ಕ್ರಿ. ಶ. ೧೭–೬–೧೮೭೪ ರಲ್ಲಿ ಭಾವ ಸಂವತ್ಸರ.

ಆಷಾಢ ಶುದ್ಧ ತೃತೀಯೆಯಲ್ಲಿ ಪರಮಪದಿಸಿದರು. ದೇವಸ್ಥಾನದ ಸಕಲ ಕೈಂಕರ್ಯಗಳನ್ನೂ ನಡೆಸುತ್ತಿದ್ದರು.

**ಇವರ ತನಿಯ್ನ—**

ಶ್ರೀಮದ್ವೇಂಕಟ ಲಕ್ಷ್ಮಣಾರ್ಯ ಯಮಿನಃ ಕಾರುಣ್ಯ ಸಿಂಧೋರ್ನಿಧೇಃ
ಸಂಪ್ರಾಪ್ತೋಭಯ ವೇದಮೌಳಿ ಹೃದಯಂ ವಾತ್ಸಲ್ಯವಾರಾನ್ನಿಧಿಮ್
ಶ್ರೀ ಯದ್ವದ್ರಿಯತೀನ್ದ್ರ ಲಬ್ಧಯತಿರಾಟ್ಸಂಪತ್ಸುತಾಖ್ಯಂ ಮುನಿಂ
ಶ್ರೀ ನಾರಾಯಣ ಪಾದಪಂಕಜ ಯುಗಧ್ಯಾನೈಕನಿಷ್ಠಂ ಭಜೇ ||

ಭವಾಬ್ಧೇ ಮಿಥುನೇ ಮಾಸಿ ಭರಣ್ಯಾಮಾಸ್ಥಿತೋದಯಮ್ |
ಸೇವೇ ಯದ್ವದ್ರಿಯತಿ ರಾಟ್ಸಂಪತ್ಸುತಮುನಿಂ ಸದಾ ||

## ಶ್ರೀ|| ಉ|| ಪೆರಿಯ ಕೊಮಾರ ಶಿಂಗರಾಚಾರ್ಯ ಸ್ವಾಮಿಗಳು
## (ದೊಡ್ಡ ಸ್ವಾಮಿಗಳು)

ಈ ಮಹನೀಯರು ಆನಿ ಮಾಸ ಪೂರ್ವಾಭಾದ್ರ ನಕ್ಷತ್ರದಲ್ಲಿ ಜನಿಸಿದರು. ಇವರಿಗೆ ಶ್ರೀ|| ಉ|| ಮುದಿಗುಂಟ ಸ್ವಾಮಿಗಳ ನಂತರ ಪಟ್ಟ. ನಾರಾಯಣ ಪಟ್ಟ ತಿರುನಾಮವು. ಎರಡೇ ಚಾತುರ್ಮಾಸ್ಯ ವ್ರತಗಳನ್ನು ನಡೆಸಿ, ಧಾತು ಸಂವತ್ಸರ ಆಷಾಢ ಶುದ್ಧ ದ್ವಿತೀಯೆಯಲ್ಲಿ (ಕ್ರಿ. ಶ. ೨೩–೬–೧೮೭೬) ತಿರುನಾರಾಯಣಪುರದಲ್ಲಿ ಪರಮಪದಿಸಿದರು.

**ಇವರ ತನಿಯ್ನ—**

ಶ್ರೀಮತ್ಕೌಶಿಕ ವಂಶ ಮೌಕ್ತಿಕಮಣಿಂ ಶ್ರೀಶೈಲವರ್ಯಾತ್ಮಜಂ |
ಶ್ರೀಮತ್ಸ್ವಾಮ್ಯ ನೃಸಿಂಹ ದೇಶಿಕ ಪದಾಸಕ್ತಾನ್ತರಂಗಂ ಶುಚಿಮ್ ||
ತಸ್ಮಾದ್ ಜ್ಞಾನದಯಾನಿಧೇರಧಿಗತತ್ರಯ್ಯನ್ತಯುಗ್ಮಾರ್ಥದಮ್ |
ವಂದೇಹಂ ಯದುಭೂಧರೇನ್ದ್ರಯತಿರಾಣ್ಣಾರಾಯಣಾಖ್ಯಂ ಮುನಿಂ ||

## ಶ್ರೀ|| ಉ|| ನಾಟಂಪಳ್ಳಿ ಅಳಹಿಯ ಶಿಂಗರಾಚಾರ್ಯ ಸ್ವಾಮಿಗಳು

ಈ ಮಹನೀಯರು ಕರ್ಕಾಟಕ ಮಾಸದ ಪೂರ್ವಾಭಾದ್ರ ನಕ್ಷತ್ರದಲ್ಲಿ ಜನಿಸಿದರು. ಇವರು ಕ್ರಿ. ಶ. ೧೮೭೬ ರಲ್ಲಿ ಆಶ್ರಮ ಸ್ವೀಕಾರ ಮಾಡಿದರು.

ಇವರಿಗೆ ಸಂಪತ್ಕುಮಾರ ಪಟ್ಟ ತಿರುನಾಮವು. ಆಂಧ್ರದೇಶದ ಶ್ರೀಕೂರ್ಮ ದಲ್ಲಿ ಕ್ರಿ. ಶ. ೧೮೮೬ರಲ್ಲಿ ಇವರು ಪರಮಪದಿಸಿದರು. ಅಲ್ಲಿಯೇ ಬೃಂದಾವನ ವಾಯಿತು. ಇವರು ಆಂಧ್ರ ದೇಶದಲ್ಲಿ ಸಂಚರಿಸುತ್ತಿದ್ದಾಗ ಬೊಬ್ಬಿಲಿ ಮಹಾರಾಜರು ಇವರನ್ನು ತಮ್ಮ ಆಸ್ಥಾನಕ್ಕೆ ಬಿಜಯಮಾಡಿಸಿಕೊಂಡು ಮರ್ಯಾದೆಯನ್ನು ಮಾಡಿದರು.

**ಇವರ ತನಿಯನ್—**

ಶೇಷಾರ್ಯಾನ್ವಯ ದುಗ್ಧವಾರಿಧಿ ಕಲಾನಾಥಾದನನ್ತಾರ್ಯತಃ
ಸಂಪ್ರಾಪ್ತೋಭಯ ವೇದಮೌಳಿಮನಘಂ ಶ್ರೀಭಾಷ್ಯಸಾರಾರ್ಥದಂ ।
ಶಾಂತ್ಯಾದ್ಯಾತ್ಮ ಗುಣಾಕರಂ ಯತಿಪತೇಃ ಪಾದಾಂಬುಜೈಕಾಶ್ರಯಂ
ವಂದೇಹಂ ಯದುಭೂಧರೇನ್ದ್ರಯತಿ ರಾಟ್ಸಂಪತ್ಕುಮಾರಂ ಮುನಿಮ್ ॥
ಮಾಸಿ ಕರ್ಕಟಿಕೇ ಪೂರ್ವ ಪ್ರೌಷ್ಠಪದ್ಯಾಂ ಸಮುದ್ಭವಮ್ ।
ಯದ್ವದ್ರಿ ಯತಿರಾಜಾಖ್ಯಂ ಸಂಪತ್ಸುತ ಮುನಿಂ ಭಜೇ ॥

ತಮ್ಮ ಜತೆಯಲ್ಲಿಯೇ ಇದ್ದ ಶ್ರೀಮದಿತ್ಯಾದಿ ನಾಟಂಪಳ್ಳಿ ತಿರುನಾರಾಯಣ ಪೆರುಮಾಳರಿಗೆ ಪಟ್ಟವನ್ನು ಕೊಟ್ಟರು.

## ಶ್ರೀ॥ ಉ॥ ನಾಟಂಪಳ್ಳಿ ತಿರುನಾರಾಯಣ ಪೆರುಮಾಳ್ ಸ್ವಾಮಿಗಳು

ಇವರು ಮಿಥುನಮಾಸ ಆರ್ದ್ರಾನಕ್ಷತ್ರದಲ್ಲಿ ಜನಿಸಿದರು. ಕ್ರಿ. ಶ. 1886ನೆಯ ಮಾರ್ಚಿ ಪಾರ್ಥಿವ ಫಾಲ್ಗುಣ ಕೃಷ್ಣಪಕ್ಷ ಪಂಚಮಿಯಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದರು ಇವರು ಅಲ್ಪಕಾಲವೇ ಪೀಠಸ್ಥರಾಗಿದ್ದು ಯಾತ್ರಾಮಾರ್ಗದಲ್ಲಿ 3–8–1887ನೆಯ ಸರ್ವಜಿತ್ ಶ್ರಾವಣ ಕೃಷ್ಣ ಅಮಾವಾಸ್ಯಾದಿನದಲ್ಲಿ ನಾಗಪುರದಲ್ಲಿ ಪರಮಪದಿಸಿದರು.

**ಇವರ ತನಿಯನ್ :—**

ಶ್ರೀಮದ್ಯಾದವ ಶೈಲಶೃಂಗಯತಿರಾಟ್ಸಂಪತ್ಕುಮಾರಾದ್ಯತೇಃ ।
ಸಂಪ್ರಾಪ್ತೋಭಯವೇದಮೌಳಿಮನಘಂ ಶಾನ್ತಿಕ್ಷಮಾಭೂಷಣಂ ॥
ಶ್ರೀಭಾಷ್ಯದ್ರಮಿಡಾಗಮಾದಿನಿರತಂ ಶ್ರೀವೈಷ್ಣವಾರಾಧಕಂ ।
ವನ್ದೇಹಂ ಯದುಭೂಧರೇನ್ದ್ರ ಯತಿರಾಣ್ಣಾರಾಯಣಾಖ್ಯಂ ಮುನಿಮ್ ॥

ಬಾಲಧನ್ವಿಕುಲೋದ್ಭೂತಂ ಮಿಥುನೇ ಮಾಸಿ ರೌದ್ರಭೇ ।
ಯದ್ವದ್ರಿಯತಿರಾಜಶ್ರೀ ನಾರಾಯಣಮುನಿಂ ಭಜೇ ॥

## ಶ್ರೀ॥ ಉ॥ ಜೀಯರ್ ಸನ್ನಿಧಿ ತಿರುಮಲಾಚಾರ್ಯಸ್ವಾಮಿಗಳು

ಈ ಮಹಾನುಭಾವರು ಜನಿಸಿದ್ದು ಕರ್ಕಾಟಕ ಮಾಸ, ಸ್ವಾತಿ ನಕ್ಷತ್ರ. ಇವರು ಘನವಿದ್ವಾಂಸರು, ಪರಮಸಾಧುಗಳು. ರೀವಾ ಸಂಸ್ಥಾನದ ಗೋವಿಂದಘಡದಲ್ಲಿ ಇವರು ಕ್ರಿ. ಶ. ೧೮೮೭ ರಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದರು. ಇವರದು ಸಂಪತ್ಕುಮಾರ ಪಟ್ಟವು. ಶ್ರೀಮದಿತ್ಯಾದಿ ಯೋಗಿ ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರೊಡನೆ ಮದ್ರಾಸಿನಲ್ಲಿ ಭಗವದ್ವಿಷಯಾದಿ ತೆನ್ನಾಚಾರ್ಯ ಗ್ರಂಥಗಳನ್ನು ಪರಿಶೋಧಿಸಿ ಅಚ್ಚುಮಾಡಿಸಿದರು. ಅನೇಕ ಪಾಶ್ಚಾತ್ಯದೇಶದ ಪಂಡಿತರೂ ಈ ಸ್ವಾಮಿಗಳವರಲ್ಲಿ ಶಾಸ್ತ್ರ ವಿಚಾರಗಳಲ್ಲಿ ಉಪದೇಶವನ್ನು ಪಡೆದರು. ಅವರುಗಳಲ್ಲಿ ಜರ್ಮನ್ ವಿದ್ವಾಂಸರಾದ ಪಾಲ್ ಡ್ಯೂಸೆರ್ ಎಂಬುವವರೂ ಒಬ್ಬರಾಗಿದ್ದರು. ಈ ಸ್ವಾಮಿಗಳು ಬದರಿಕಾಶ್ರಮ ಮುಂತಾದ ಉತ್ತರ ದೇಶದ ಯಾತ್ರೆಗಳನ್ನು ಮಾಡಿ, ಅನೇಕ ಶಿಷ್ಯರನ್ನು ಸಂಪಾದಿಸಿ ಅವರಿಗೆ ಮಹತ್ತರವಾದ ಉಪದೇಶವನ್ನು ಮಾಡಿದರು. ರೀವಾ ಮತ್ತು ಹೈದರಾಬಾದಿನ ರಾಜರುಗಳಿಂದ ಬಹಳವಾಗಿ ಗೌರವಿಸಲ್ಪಟ್ಟರು. ಬೆಂಗಳೂರಿಗೆ ರಾಜ ಮರ್ಯಾದೆಯೊಡನೆ ಬಂದು ತಿರುನಾರಾಯಣಪುರಕ್ಕೆ ಬಿಜಯಮಾಡಿಸಿ, ಶ್ರೀನಾರಾಯಣಸ್ವಾಮಿ ಲಕ್ಷ್ಮೀ ನೃಸಿಂಹ ಸ್ವಾಮಿಗಳವರ ಕೈಂಕರ್ಯಗಳನ್ನು ನಡೆಯಿಸುತ್ತ ಶಿಷ್ಯವೃಂದಕ್ಕೆ ಉಪದೇಶಿಸುತ್ತಿದ್ದರು. ಪುನಃ ಉತ್ತರದೇಶಕ್ಕೆ ಬಿಜಯಮಾಡಿ ಟೆಹರಿ ಸಂಸ್ಥಾನಾಧೀಶ್ವರನಿಂದ ಆಹ್ವಾನಿತರಾಗಿ ಗೌರವಿಸಲ್ಪಟ್ಟರು. ಶ್ರೀಗಳವರು ಪುನಃ ಬದರಿಕಾಶ್ರಮ ಯಾತ್ರೆಯನ್ನು ಮಾಡಿ ೨೮–೧೦–೧೯೦೧ ರಲ್ಲಿ, ಪ್ಲವ, ಆಶ್ವಯುಜ ಕೃಷ್ಣ ದ್ವಿತೀಯಾದಲ್ಲಿ ಗೋವಿಂದಘಡದಲ್ಲಿ ಪರಮಪದಿಸಿದರು. ಬಹಳ ದ್ರವ್ಯವನ್ನು (ಸುಮಾರು ರೂ. ೧೫೦೦೦) ಸಂಪಾದಿಸಿ, ತಮಗೆ ಆಪ್ತರಾದ ಹಿರಿಯರ ಮೂಲಕ ಅರ್‌ಬತ್‌ನಾಟ್ ಬ್ಯಾಂಕಿನಲ್ಲಿ ಇಟ್ಟಿದ್ದರು. ಈ ಮಹನೀಯರ ಕಾಲದಲ್ಲಿ ಮೂಲಸ್ಥಾನದಲ್ಲಿ ಶ್ರೀಸನ್ನಿಧಿಯಲ್ಲಿ ದೇವರ ಪೂಜಾಗೃಹ, ತಿರುಮಡಪಳ್ಳಿ, ಕಾಲಕ್ಷೇಪ ಸ್ಥಳ ಇವು ಹೊಸದಾಗಿ ಕಟ್ಟಲ್ಪಟ್ಟುವು.

ಇವರ ತನಿಯರ್—

ಶೇಷಾರ್ಯಾನ್ವಯ ಬಾಲಧನ್ವಿಕುಲಜ ಶ್ರೀವಾಸ ಕೃಷ್ಣಾರ್ಯಯೋಃ
ಪ್ರೇಮ್ಣಾಪ್ತೋಭಯ ವೇದಮೌಳಿಮನಘಂ ಶಾನ್ತ್ಯಾದಿವಾರಾಂನಿಧಿಮ್ ।
ಶ್ರೀನಾರಾಯಣ ಯೋಗಿವರ್ಯ ಚರಣ ದ್ವಂದ್ವೈಕ ನಿಷ್ಠಂ ಭಜೇ
ಶ್ರೀಮದ್ಯಾದವಶೈಲ ಶೃಙ್ಗ ಯತಿ ರಾಟ್ಸಂಪತ್ಕುಮಾರಂ ಮುನಿಮ್ ॥
ಶೇಷವಂಶ್ಯಾಚ್ಛ್ರೀನಿವಾಸಾದ್ವರಸನ್ನಿಧಿ ವೇದ ದಾತ್ ।
ಸ್ವಾತಿಜಂ ಕರ್ಕಟೇ ವನ್ದೇಮಂತ್ರ ವೇದಾರ್ಥದಂ ಮುನಿಮ್ ॥

## ಶ್ರೀ॥ ಉ॥ ಚಿನ್ನಕುಮಾರ ಶಿಂಗ್ರಾಚಾರ್ಯ ಸ್ವಾಮಿಗಳವರು

ಈ ಮಹಾನುಭಾವರು ವೃಷಭ ಮಾಸ ಅನೂರಾಧಾ ನಕ್ಷತ್ರದಲ್ಲಿ ತಿರುನಾರಾಯಣಪುರದಲ್ಲಿ ಕ್ರಿ. ಶ. ೧೮೬೭ ರಲ್ಲಿ ಜನಿಸಿದರು. ಶಾಸ್ತ್ರಾಭ್ಯಾಸವನ್ನು ತಿರುನಾರಾಯಣಪುರದಲ್ಲಿಯೇ ಮಾಡಿ, ಮದ್ರಾಸ್ ತಿರುವಲ್ಲಿಕ್ಕೇಣಿಗೆ ದಯಮಾಡಿಸಿದಮೇಲೆ ನಮ್ಮ ಸಮುದಾಯದವರೆಲ್ಲರೂ ಇವರ ಮಂತ್ರೋಪಾಸನ ಶಕ್ತಿಯನ್ನು ಅನುಭವಿಸಿ, ಇವರಿಗೆ ಸಹಾಯ ಮಾಡುತ್ತಿದ್ದರು. ಇವರು ಶ್ರೀ ನೃಸಿಂಹದೇವರ ಉಪಾಸಕರಾಗಿದ್ದರು. ಶ್ರೀ ಜೀಯರ್ ಸನ್ನಿಧಿ ಸ್ವಾಮಿಗಳು ಇವರು ಆಶ್ರಮ ಸ್ವೀಕಾರ ಮಾಡಬೇಕೆಂದು ತಮ್ಮ ಅವಸಾನ ಕಾಲದಲ್ಲಿ ರೀವಾ ಸಂಸ್ಥಾನದಿಂದ ಅಪ್ಪಣೆ ಕೊಡಿಸಿದ್ದ ಶ್ರೀಮುಖವನ್ನು ಶಿರಸಾವಹಿಸಿಯೂ ರೀವಾ ಸಂಸ್ಥಾನದ ರಾಜರ ಆಹ್ವಾನದಂತೆಯೂ ಗೋವಿಂದಘಡಕ್ಕೆ ದಯಮಾಡಿಸಿ ೨೩–೧–೧೯೦೨ ರಲ್ಲಿ ಪ್ಲವ ಪುಷ್ಯ ಪೌರ್ಣಿಮೆಯ ದಿನ ಸನ್ಯಾಸಾಶ್ರಮವನ್ನು ಅಂಗೀಕರಿಸಿದರು. ಉತ್ತರ ದೇಶದ ಯಾತ್ರೆಯಲ್ಲಿ ಅಯೋಧ್ಯೆಗೆ ಬಿಜಯಮಾಡಿಸಿದರು. ಶ್ರೀ॥ ಉ॥ ಶ್ರೀಯೋಗಿ ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳು ಅಲ್ಲಿ ಶ್ರೀರಾಮ ದೇವರ ಗುಡಿಯನ್ನು ಕಟ್ಟಿಸಿ, ವಿಗ್ರಹಗಳನ್ನು ಪ್ರತಿಷ್ಠೆಮಾಡುವುದಕ್ಕೆ ಪ್ರೋತ್ಸಾಹವನ್ನು ಕೊಟ್ಟು, ಇತರ ವಿಧದ ಸಹಾಯಗಳನ್ನು ಒದಗಿಸಿಕೊಟ್ಟರು. ಅಯೋಧ್ಯೆಯಿಂದ ಗೋವಿಂದಘಡಕ್ಕೆ ದಯಮಾಡಿಸಿ ಅಲ್ಲಿಂದ ಹೊರಟು ಹೈದರಾಬಾದ್, ನ್ಯೂಜ್‌ವೀಡ್, ವನಪರ್ತಿ, ಗದ್ವಾಲ್ ಸಂಸ್ಥಾನಗಳ ರಾಜರುಗಳಿಂದ ಸನ್ಮಾನಿತರಾಗಿ, ಗುಂಟೂರಿಗೆ ತಲಪಿದರು. ಅಲ್ಲಿಂದ

ನೆಲ್ಲೂರಿಗೆ ಬಿಜಯಮಾಡಿಸಲು. ಆ ಊರಿನವರೆಲ್ಲರೂ ಅತ್ಯಂತ ವೈಭವದಿಂದ ಶ್ರೀ ಸ್ವಾಮಿಗಳನ್ನು ಶ್ರೀ ಸ್ಥಾನಕ್ಕೆ ಬಿಜಯಮಾಡಿಸಿಕೊಂಡು ಅನಂತವಾದ ಮರ್ಯಾದೆಗಳನ್ನು ಸಲ್ಲಿಸಿದರು.

ಅನಂತರ ಜೋಗೂರಿಗೆ ಸರ್ಕಾರೀ ಮರ್ಯಾದೆಗಳೊಡನೆ ಮಲ್ಲೇಶ್ವರಕ್ಕೆ ಶ್ರೀಗಳವರು ಬಿಜಯಮಾಡಿ, ಶ್ರೀ ವೇಣುಗೋಪಾಲಕೃಷ್ಣಸ್ವಾಮಿ ದೇವಸ್ಥಾನದಲ್ಲಿ ಅಗ್ರಮರ್ಯಾದೆಯನ್ನು ಹೊಂದಿ, ೩–೧೧–೧೯೦೬ ರಲ್ಲಿ ತಿರುನಾರಾಯಣಪುರಕ್ಕೆ ದಯಮಾಡಿಸಿದರು. ತಿರುನಾರಾಯಣಪುರದಲ್ಲಿ ಶ್ರೀ ನಾರಾಯಣಸ್ವಾಮಿ ನರಸಿಂಹದೇವರ ಕೈಂಕರ್ಯದಲ್ಲಿ ನಿರತರಾಗಿದ್ದು ೨೬–೧೧ ೧೯೦೭ ರಲ್ಲಿ ಪ್ಲವಂಗ ಕಾರ್ತಿಕ ಕೃಷ್ಣಪಂಚಮಿಯಲ್ಲಿ ಪರಮಪದಿಸಿದರು. ಈ ಕಾಲದಲ್ಲೇ ಮದ್ರಾಸ್ ಅರ್‌ಬತ್‌ನಟ್ ಬ್ಯಾಂಕು ದಿವಾಳಿಯಾಗಿ ನಷ್ಟವಾಯಿತು. ಶ್ರೀಗಳವರು ನೆಲ್ಲೂರಿನಲ್ಲಿದ್ದಾಗ ತಮ್ಮ ಕಾಲಾನಂತರ ತಮ್ಮ ಉತ್ತರಾಧಿಕಾರಿಯಾಗಿ ಸನ್ಯಾಸಾಶ್ರಮವನ್ನು ವಹಿಸಬೇಕೆಂದು ಶ್ರೀಮದಿತ್ಯಾದಿ (ಕುಟ್ಟಿಯತ್ತಂಬಿ) ದಾಮೋದರಂ ರಾಮಾನುಜಪುರಂ ಅನಂದಾಣ್ ಪಿಳ್ಳೈ ಅಳಶಿಂಗರಾಚಾರ್ಯ ಸ್ವಾಮಿಗಳಿಗೆ ಆಶೀರ್ವದಿಸಿದ್ದರು.

ಇವರ ತನಿಯನ್

ಶ್ರೀಯದ್ವದ್ರಿ ಯತೀನ್ದ್ರ ಪೂರ್ಣ ಕರುಣಾಪಾತ್ರಂ ತದೀಯೇ ಮತೇ
ಸಂಪ್ರಾಪ್ತಾಶ್ರಮ ಮಾತ್ರೈಕ ಶರಣಂ ಸಂಪತ್ಕುಮಾರೇಕ್ಷಣಾತ್ ।
ಶ್ರೀ ರಾಮಾನುಜ ಸಂಯಮೀನ್ದ್ರ ಶತಜಿಚ್ಛ್ರೀಸೂಕ್ತಿ ಸಾರಾರ್ಥದಂ ।
ಶ್ರೀಮಂತಂ ಯತಿರಾಜ ಸಂಯಮಿವರಂ ನಾರಾಯಣಂ ಸಂಶ್ರಯೇ ॥

ವೃಷಭೇ ಮಾಸ್ಯನೂರಾಧಾ ಜಾತಂ ನಾರಾಯಣಾಭಿಧಮ್ ।
ಬಾಲಧನ್ವಿಕುಲಾಬ್ಧೀಂದುಂ ಯತಿರಾಜ ಗುರುಂ ಭಜೇ ॥

## ಶ್ರೀ॥ ಉ॥ ರಾಮಾನುಜಪುರಂ ತಿರುಮಲೈ ಅನಂದಾಣ್ ಪಿಳ್ಳೈ ಅಳಕಿಯ ಶಿಂಗರಾಚಾರ್ಯ ಸ್ವಾಮಿಗಳು

## (ಶ್ರೀ ಕುಟ್ಟಿಯತ್ತಂಬಿದಾಮೋದರಂ ಅಳಶಿಂಗರಾಚಾರ್ಯಸ್ವಾಮಿಗಳು)

ಇವರ ಜನನ ಶಾ.ಶ. ೧೮೪೮ ನೇ ಪರಾಭವ ಮೇಷಮಾಸ ಶತಭಿಷಾ

ನಕ್ಷತ್ರದಲ್ಲಿ. ಶ್ರೀ|| ಉ|| ಕುಮಾರ ಜೀಯರ್ ಸ್ವಾಮಿಗಳವರಿಗೆ ವಾಗ್ದಾನ ಮಾಡಿದ ಮೇಲೆ ಶಾ. ಶ. ೧೮೩೧ ನೇ ಕೀಲಕ ಸಂವತ್ಸರ ಆಷಾಢ ಶುಕ್ಲ ತ್ರಯೋದಶೀ ಭಾನುವಾರ (೧೨ ೭–೧೯೦೮ರಲ್ಲಿ) ತಿರುನಾರಾಯಣಪುರ ದಲ್ಲಿ ಶ್ರೀ ಯತಿರಾಜ ಮಠದಲ್ಲಿ ಬಹಳ ವೈಭವದೊಡನೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದರು. ಇವರದು ಸಂಪತ್ಕುಮಾರ ಪಟ್ಟವು. ಈ ಸ್ವಾಮಿಗಳು ಲೌಕಿಕ, ವೈದಿಕ ಮಾರ್ಗಗಳ ತತ್ವಗಳನ್ನು ಅರಿತವರಾಗಿ, ವೃದ್ಧರಾದರೂ ಬಹಳ ಯಶಸ್ಸಿನಿಂದ ಶ್ರೀ ಮಠದ ಕೈಂಕರ್ಯಗಳನ್ನು ನೆರವೇರಿಸಿದರು. ಈ ಮಠಕ್ಕೆ ವಿಶೇಷ ಗೌರವವನ್ನು ಪಡೆದು, ನಮ್ಮ ಸಮುದಾಯದ ಹಿರಿಯರು, ಕಿರಿಯರು ಎಲ್ಲರನ್ನೂ ಆಕರ್ಷಿಸಿ ಅನುಗ್ರಹಿಸುತ್ತಿದ್ದರು. ಶ್ರೀ ಮಠವನ್ನು ಉದ್ಧರಿಸಲು ಅನೇಕ ಪ್ರಯತ್ನಗಳನ್ನು ನಡೆಯಿಸಿದರು. ಆದರೆ ನಮ್ಮವರ ದೌರ್ಭಾಗ್ಯದಿಂದ ಐದು ವರ್ಷಗಳ ಅವಧಿಯಲ್ಲೇ ಶಾ.ಶ. ೧೮೩೫ ನೇ (ಕ್ರಿ.ಶ. ೧೯೧೩) ಪ್ರಮಾದೀಚ ಜ್ಯೇಷ್ಠ ಶುದ್ಧ ದಶಮಿಯಲ್ಲಿ ತಿರುನಾರಾಯಣಪುರ ದಲ್ಲಿ ಪರಮಪದಿಸಿದರು. ಶ್ರೀ ಮಠಕ್ಕೆ ಧನ ಸಂಗ್ರಹ ಮಾಡಿದ್ದಲ್ಲದೆ ನಿತ್ಯ ತದೀಯಾರಾಧನೆಗಳನ್ನು ಉತ್ಸಾಹದಿಂದ ನಡೆಸುತ್ತಿದ್ದ ಮಹಾನುಭಾವರು ಈ ಸ್ವಾಮಿಗಳು.

ಇವರ ತನಿಯರ್—

ಯದ್ವಾದ್ರಿನಾಥ ಪದಪಂಕಜ ಕಿಂಕರಾಗ್ರ್ಯಂ
ಶ್ರೀ ಶ್ರೀನಿವಾಸ ಕರುಣಾಪರಿಲಬ್ಧ ಬೋಧಂ |
ನಾರಾಯಣಾಖ್ಯ ಮುನಿವರ್ಯ ಕಟಾಕ್ಷಪಾತ್ರಂ
ಸಂಪತ್ಕುಮಾರ ಯತಿರಾಜಗುರುಂ ಭಜೇಹಂ ||

ಮೇಷೇ ಶತಭಿಷಗ್ಜಾತಂ ಪರಾಭವ ಶರದ್ವರೇ |
ಯದ್ವಾದ್ರಿ ಯತಿರಾಜ ಶ್ರೀ ಸಂಪತ್ಕುಮಾರ ಮುನಿಂ ಭಜೇ ||

## ಶ್ರೀ|| ಉ|| ಕೋಪೆ ವೆಂಕಟಾಚಾರ್ಯ ಸ್ವಾಮಿಗಳು

ಇವರ ಜನನ ಮಿಥುನ ಮಾಸ, ಸ್ವಾತಿ ನಕ್ಷತ್ರ. ಶಾ.ಶ. ೧೮೩೫ ನೇ ಪ್ರಮಾದೀಚ ಆಷಾಢ ಶುದ್ಧ ನವಮೀ ಶನಿವಾರದಲ್ಲಿ (೧೨–೭–೧೯೧೩)

ಶ್ರೀ ಯತಿರಾಜ ಮಠದ ಪೀಠವನ್ನಲಂಕರಿಸಿದರು. ಇವರದು ನಾರಾಯಣ ಪಟ್ಟವು. ಈ ಸ್ವಾಮಿಗಳು ಹಿಂದೆ ಶ್ರೀ ಮಠದ ಪೀಠವನ್ನಲಂಕರಿಸಿದ್ದ ಶ್ರೀ|| ಉ|| ನಾಟೇರಿ ವರದಾಚಾರ್ಯ ಸ್ವಾಮಿಗಳ ತಮ್ಮಂದಿರಾದ ಶ್ರೀ ರಾಮಾನುಜಾಚಾರ್ಯರಲ್ಲಿ ಆಯುರ್ವೇದ ವೈದ್ಯ ಶಾಸ್ತ್ರವನ್ನು ಓದಿ, ರೋಗಿಗಳಿಗೆ ವಿಶೇಷವಾಗಿ ಸಹಾಯ ಮಾಡುತ್ತಿದ್ದರು. ಶ್ರೀ|| ಉ|| ಮುದಿಗುಂಬಂ ತಿರುಮಲಾಚಾರ್ಯರ ಸಹಾಯದಿಂದ ಶ್ರೀ ಮಠದಲ್ಲಿ ೩೧-೭-೧೯೧೫ ರಲ್ಲಿ ಒಂದು ಉಭಯ ವೇದಾಂತ ಪಾಠಶಾಲೆಯನ್ನು ಸ್ಥಾಪಿಸಿ, ವಿದ್ಯಾರ್ಥಿಗಳಿಗೆ ಎಲ್ಲಾ ಸೌಕರ್ಯಗಳನ್ನೂ ಒದಗಿಸಿ, ಪಾಠಶಾಲೆಯನ್ನು ನಡೆಯಿಸುತ್ತ ಬಂದರು. ಶ್ರೀ|| ಉ|| ಮುದಿಗುಂಬಂ ತಿರುಮಲಾಚಾರ್ಯರವರು ಕಾರ್ಯದರ್ಶಿಗಳಾಗಿದ್ದು, ತಮ್ಮ ವಿಶ್ರಾಂತಿ ಕಾಲದಲ್ಲಿ ಶ್ರೀ ಮಠದ ಕಾರ್ಯಗಳನ್ನು ಭಕ್ತಿಯಿಂದ ನೆರವೇರಿಸುತ್ತ ಬಂದರು. ೭-೪-೧೯೧೪ ರಲ್ಲಿ ಆಗಿನ ದಿವಾನ್ ಶ್ರೀ ವಿಶ್ವೇಶ್ವರಯ್ಯನವರು ಶ್ರೀ ಮಠದಲ್ಲಿ ಶ್ರೀ ಸ್ವಾಮಿಗಳವರ ದರ್ಶನವನ್ನು ಮಾಡಿ ಆಶೀರ್ವಾದವನ್ನು ಪಡೆದರು. ೧೬-೭-೧೯೧೫ ರಲ್ಲಿ ಶ್ರೀಮನ್ಮಹಾರಾಜರವರು ಶ್ರೀ ಯತಿರಾಜ ಮಠಕ್ಕೆ ದಯಮಾಡಿಸಿ, ಶ್ರೀ ಸ್ವಾಮಿಗಳವರಿಂದ ತೀರ್ಥ ಪ್ರಸಾದವನ್ನು ಪಡೆದು, ಮಹಾಶೀರ್ವಾದವನ್ನು ಹೊಂದಿ, ಶ್ರೀ ಜೀಯರ್ ಸ್ವಾಮಿಗಳವರಿಗೆ ಜೋಡಿಶಾಲು ಇತ್ಯಾದಿ ಮರ್ಯಾದೆಯನ್ನು ಸಮರ್ಪಿಸಿದರು. ಶ್ರೀ ಸ್ವಾಮಿಗಳವರು ಶಾ.ಶ. ೧೮೪೦ ನೇ ಪಿಂಗಳ ಆಷಾಢ ಕೃಷ್ಣ ಪ್ರಥಮೆಯಲ್ಲಿ (ಕ್ರಿ.ಶ. ೧೯೧೭) ತಿರುನಾರಾಯಣಪುರದಲ್ಲಿ ಪರಮಪದಿಸಿದರು.

**ಇವರ ತನಿಯನ್—**

ಶ್ರೀಶೈಲ ಲಕ್ಷ್ಮಣಮುನೇಃ ಕಲಿತಾತ್ಮಬೋಧಂ
ಸಂಪತ್ಕುಮಾರ ಯಮಿನಃ ಕರುಣೈಕ ಪಾತ್ರಮ್ ।
ಶ್ರೀ ಯಾದವಾದ್ರಿ ಯತಿರಾಜ ಪದಾಬ್ಜ ಭೃಂಗಂ
ನಾರಾಯಣಾರ್ಯ ಯಮಿನಂ ಶರಣಂ ಪ್ರಪದ್ಯೇ ॥

ಮಿಥುನೇ ಭಾಸ್ಕರೇ ಸ್ವಾತಿ ನಕ್ಷತ್ರೇ ವಿಹಿತೋದಯಂ ।
ಯದ್ವದ್ರಿ ಯತಿರಾಜಶ್ರೀ ನಾರಾಯಣಮುನಿಂ ಭಜೇ ॥

## ಶ್ರೀ॥ ಉ॥ ವಿದ್ವಾನ್ ಆಸೂರಿ ಅನನ್ತಾಳ್ವಾರ್ ಸ್ವಾಮಿಗಳು

ಈ ಸ್ವಾಮಿಗಳ ಜನನ ಶಾ.ಶ. ೧೭೮೧, ಕಾಳಯುಕ್ತಿ ಮಾಘಮಾಸ ಕೃಷ್ಣಪಕ್ಷ ಸಪ್ತಮೀ ತಿಥಿ, ಅನೂರಾಧಾ ನಕ್ಷತ್ರ. ಈ ಸ್ವಾಮಿಗಳು ಪೂರ್ವಾಶ್ರಮದಲ್ಲಿ ಶ್ರೀ ಯತಿರಾಜ ಮಠದ ಶ್ರೇಯೋಭಿವೃದ್ಧಿಗಾಗಿ ಬಹಳ ಶ್ರಮಿಸಿದರು. ಲೌಕಿಕ ವಿದ್ಯೆಯಲ್ಲೂ, ವೈದಿಕ ವಿದ್ಯೆಯಲ್ಲೂ ಬಹಳ ಹಿರಿಯ ಪಂಡಿತರಿವರು. ಕಾವ್ಯ, ನಾಟಕ, ವ್ಯಾಕರಣ, ವೇದಾಂತವೇ ಮುಂತಾದ ಶಾಸ್ತ್ರಗಳಲ್ಲೂ, ಕವಿತೆಯಲ್ಲೂ ಉದ್ದಾಮ ಪಂಡಿತರು. ಪಂಡಿತ ಮಂಡಲಿಗಳಲ್ಲಿಯೂ, ಅನೇಕ ರಾಜಸಭೆಗಳಲ್ಲಿಯೂ ಅಗ್ರಮರ್ಯಾದೆಗಳನ್ನು ಪಡೆದವರು. ಅತಿಶಯ ವಿದ್ಯಾನಿಧಿ ಇವರು. ಕನ್ನಡ, ತಮಿಳು, ತೆಲುಗು, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ಅಮೋಘವಾದ ಉಪನ್ಯಾಸಗಳನ್ನು ಮಾಡಿದವರು. ಭರತಖಂಡವನ್ನೆಲ್ಲಾ ಅನೇಕಾವರ್ತಿ ಯಾತ್ರೆಮಾಡಿದವರು. ಹಿಂದಣ ಅನೇಕ ಜೀಯರ್ ಸ್ವಾಮಿಗಳ ಇಷ್ಟದಂತೆಯೂ ನಮ್ಮ ಸಮುದಾಯದವರ ಏಕಮುಖವಾದ ಪ್ರಾರ್ಥನೆಯಂತೆಯೂ ಇವರು ಕ್ರಿ.ಶ ೧೧-೨-೧೯೨೧ ರಲ್ಲಿ ರೌದ್ರಿ ಮಾಘ ಶುದ್ಧ ತೃತೀಯಾ ಶುಕ್ರವಾರದಲ್ಲಿ ಸನ್ಯಾಸಾಶ್ರಮವನ್ನು ವಹಿಸಿ, ಶ್ರೀ ರಾಮಾನುಜರ ದಿವ್ಯಪೀಠವನ್ನಲಂಕರಿಸಿದರು. ಈ ಸ್ವಾಮಿಗಳ ಆಶ್ರಮ ಸ್ವೀಕಾರ ಸಮಾರಂಭವು ಅಸಾಧಾರಣ ಪ್ರತಿಭೆಯಿಂದ ಬೆಳಗಿತು. ೧೦-೧-೧೯೨೩ ರಲ್ಲಿ ಶಿಷ್ಯರು, ಅಭಿಮಾನಿಗಳು ಇವರ ಪ್ರಾರ್ಥನೆಯಂತೆ ಪರಿವಾರದೊಡನೆ ಬಹಳ ವಿಜೃಂಭಣೆಯಿಂದ ಉತ್ತರ ದೇಶದ ಯಾತ್ರೆಗೆ ಬಿಜಯಮಾಡಿಸಿದರು. ಏಳು ವರುಷಗಳ ಕಾಲ ಉತ್ತರ ದೇಶದ ಯಾತ್ರೆಯನ್ನು ಮಾಡಿ, ೧೦-೧೧-೧೯೨೯ ರಲ್ಲಿ ಅನಂತ ಮರ್ಯಾದೆಗಳೊಡನೆ ಬೆಂಗಳೂರು ಮಲ್ಲೇಶ್ವರಕ್ಕೆ ಬಿಜಯಮಾಡಿದರು. ಈ ಯಾತ್ರಾ ಚರಿತ್ರ ಸಂಗ್ರಹವನ್ನು ಶ್ರೀಗಳವರನ್ನು ಪ್ರಾರ್ಥಿಸಿ, ಅಪ್ಪಣೆಯನ್ನು ಪಡೆದು, ಯಾತ್ರಾ ದಿನಚರಿ ಗ್ರಂಥಗಳನ್ನು ನೋಡಿಯೂ, ಕೇಳಿಯೂ, ಪ್ರತ್ಯೇಕ ಗ್ರಂಥವಾಗಿ ಈ ಗ್ರಂಥವನ್ನು ಬರೆದವನೇ ಹಿಂದೆಯೇ ಬರೆದು, ಶ್ರೀ ಮಠದ ಸಹಾಯದಿಂದ ಅಚ್ಚು ಮಾಡಿದ್ದಾನೆ. ಮುಂದಣವರಿಗೆ ಈ ಗ್ರಂಥವು ಬಹಳ ಉಪಯೋಗ. ಅನೇಕ ವಿವರಗಳಿವೆ, ಯಾತ್ರೆಯಲ್ಲಿ ಅನೇಕ ಶಿಷ್ಯರಿಗೆ ಸಮಾಶ್ರಯಣ

ಮಾಡಿದರು. ನೂಜ್‌ವೇಡ್, ಪಿಠಾಪುರಂ, ತೂಣಿ, ಬೊಬ್ಬಿಲಿ, ವುಂದಸಾ, ರೀವಾ, ಹೈದರಾಬಾದ್ ಸಂಸ್ಥಾನಗಳ ಮಹಾರಾಜರುಗಳಿಂದ ಸನ್ಮಾನಿತರಾಗಿರುವರು. ಅನೇಕ ಗ್ರಂಥಗಳನ್ನು ಪರಿಶೋಧಿಸಿ ಅಚ್ಚು ಮಾಡಿಸಿರುವರು. ನಾನಾ ಭಾಷೆಗಳಲ್ಲಿ ಅನೇಕ ಉಪನ್ಯಾಸಗಳನ್ನು ದಯಪಾಲಿಸಿರುತ್ತಾರೆ. ಹಿಂದೂ ಮತೀಯರ ಮಹಾಸಮ್ಮೇಳನದಲ್ಲಿ ಧರ್ಮಾಚಾರ್ಯ ಪೀಠವನ್ನು ಅಲಂಕರಿಸಿ, ಅಪೂರ್ವವಾದ ಮರ್ಯಾದೆಯನ್ನು ಹೊಂದಿದರು. ಶಿಲಾಶಾಸನದ ಪ್ರತಿಷ್ಠೆ, ನೂತನ ಗ್ರಾಮ ನಿರ್ಮಾಣ, ಹಿಂದಣ ಶ್ರೀ ಸ್ವಾಮಿಗಳವರ ಬೃಂದಾವನ ಜೀರ್ಣೋದ್ಧಾರ—ಈ ಕೆಲಸಗಳೆಲ್ಲಾ ನಡೆದಿವೆ. ಶಿಷ್ಯ ಸಂಪತ್ತಿಯೂ ಬಹಳ ಹೆಚ್ಚಿತು. ಶ್ರೀ ಯತಿರಾಜ ಮಠದ ಖ್ಯಾತಿಯು, ಉತ್ತರ, ದಕ್ಷಿಣ ಹಿಂದುಸ್ಥಾನದಲ್ಲೆಲ್ಲಾ ಹರಡಿತು. ತಿರುನಾರಾಯಣಪುರಕ್ಕೆ ವೈಭವದೊಡನೆ ಬಿಜಯಮಾಡಿಸಿ, ಶ್ರೀ ತಿರುನಾರಾಯಣ, ಶೆಲ್ವಪಿಳ್ಳೆ, ಉಡೈಯವರ್, ಶ್ರೀ ಲಕ್ಷ್ಮೀನರಸಿಂಹರ ಕೈಂಕರ್ಯಗಳನ್ನು ನಡೆಯಿಸುತ್ತಿದ್ದು, ಪುನಃ ಉತ್ತರದೇಶ, ಮಲಯಾಳ ದೇಶಗಳಿಗೆಲ್ಲಾ ಬಿಜಯಮಾಡಿಸಿ, ಮಹಾಸಭೆಗಳಲ್ಲಿ ಅಗ್ರಾಸನಾಧಿಪತ್ಯವನ್ನು ವಹಿಸಿ ಉಪದೇಶಿಸಿದರು. ಅಲ್ಲದೆ ಅನೇಕ ಅಮುದ್ರಿತವಾದ ಮಹಾ ಗ್ರಂಥಗಳನ್ನು ಪರಿಶೋಧಿಸಿ, ಮುದ್ರಣಕ್ಕೆ ಸಿದ್ಧಪಡಿಸಿದರು, ಮುದ್ರಿಸಿದರು. ಈ ಗ್ರಂಥಗಳ ನಾಮಾವಳಿಯನ್ನು ಈ ಗ್ರಂಥದ ಬೇರೆ ಪ್ರಕರಣದಲ್ಲಿ ಬರೆದಿದೆ. ನೆಲ್ಲೂರು, ಮದ್ರಾಸ್, ಕೊಚ್ಚಿ, ಗುಡಿವಾಡ ಮುಂತಾದ ಸ್ಥಳಗಳಿಗೆ ಆಹ್ವಾನಿತರಾಗಿ ಬಿಜಯಮಾಡಿಸಿದ್ದರು. ಸುಮಾರು ೩೨ ಸಂವತ್ಸರಗಳು ಶ್ರೀ ಮಠದ ಪೀಠವನ್ನಲಂಕರಿಸಿ, ೧೭—೫—೧೯೪೩ ರಲ್ಲಿ ಸ್ವಭಾನು ವೈಶಾಖ ಶುದ್ಧ ತ್ರಯೋದಶಿಯಲ್ಲಿ ತಿರುನಾರಾಯಣಪುರದಲ್ಲಿ ಪರಮಪದಿಸಿದರು. ಇವರು ಮಲ್ಲೇಶ್ವರದಲ್ಲಿ ಶ್ರೀ ಮಠದ ಕಟ್ಟಡವನ್ನು ಪ್ರಾರಂಭಿಸಿದರು.

ಶ್ರೀ ಮಠದಲ್ಲಿ ಕೆಲವು ನಿರ್ಧಾರವಾದ ಕೈಂಕರ್ಯಗಳಿಗಾಗಿ ಶ್ರೀಗಳವರು ಪೂರ್ವಾಶ್ರಮದಲ್ಲಿ ಸಂಪಾದಿಸಿದ್ದ ೨೦೦೦ ರೂಪಾಯಿಗಳನ್ನು ಮೀಸಲಾಗಿಟ್ಟು, ಈ ಧರ್ಮವನ್ನು ನಿರಂತರವಾಗಿ ನಡೆಯಿಸಿಕೊಂಡು ಬರುವುದಕ್ಕಾಗಿ ಒಂದು ಸಮಿತಿಯನ್ನು ಏರ್ಪಡಿಸಿದ್ದಾರೆ. ಕೈಂಕರ್ಯಗಳು ನಡೆದುಬರುತ್ತಿವೆ. ಶ್ರೀಮಠ

ದಲ್ಲಿ ಸಂವತ್ಸರವೂ ಎಲ್ಲಾ ತಿಂಗಳುಗಳಲ್ಲಿಯೂ ಕೆಲಕೆಲವು ಗೊತ್ತಾದ ದಿನಗಳಲ್ಲಿ ಶ್ರೀ ಲಕ್ಷ್ಮೀನರಸಿಂಹದೇವರಿಗೆ ಬಾಲಭೋಗವೂ, ರಾಜಭೋಗವೂ, ಕ್ಷೀರನಿವೇದನ ಕೈಂಕರ್ಯ ನಡೆಯುವುದಕ್ಕಾಗಿ ಮುಖ್ಯವಾಗಿ ಆಂಧ್ರದೇಶದ ಅನೇಕ ಭಕ್ತಾದಿಗಳಿಂದ ದ್ರವ್ಯವು ಶೇಖರಿಸಲ್ಪಟ್ಟಿತು. ಇದು ಮೈಸೂರು ಸರ್ಕಾರದಲ್ಲಿ ಧರ್ಮನಿಧಿಯಾಗಿ ಇಡಲ್ಪಟ್ಟಿದೆ.

ಈ ಸ್ವಾಮಿಗಳಿಗೂ ಶ್ರೀಮಠದ ಟ್ರಸ್ಟಿಗಳಿಗೂ ವೈಮನಸ್ಯವುಂಟಾಗಿ ಸ್ವಾಮಿಗಳ ಕಾಲದಲ್ಲೇ ಒಂದು ವಿಧವಾಗಿ ಬಗೆ ಹರಿಯಿತು.

ಇವರ ತನಿಯನ್—

ಶ್ರೀರಾಮಾನುಜಯೋಗಿನಾ ಭಗವತಾ ಪೂತೇಭಿಜಾತಂ ಕುಲೇ
ಯದ್ವದ್ವಾ ತದುಪಕ್ರಮೇ ಯತಿಮಠೇ ಸಂಪ್ರಾಪ್ತ ಮೋಕ್ಷಾಶ್ರಮಮ್ ।
ಪ್ರಾಪ್ತಾಭಿಖ್ಯಮನಂತ ಸಂಯಮಿವರಂ ಸಂಪತ್ಸುತಾಖ್ಯೇಪದೇ
ಶ್ರೀಮತ್ಸ್ವಾಮ್ಯ ನೃಸಿಂಹ ಯೋಗಿಕರುಣಾಲಬ್ಧಾತ್ಮಬೋಧಂ ಭಜೇ ॥
ಕಾಲಯುಕ್ತಿ ಶರತ್ಸ್ಕಂಧ ಮೈತ್ರತಾರಾಸಮುದ್ಭವಮ್ ।
ಯದ್ವದ್ರಿ ಯತಿರಾಜಶ್ರೀ ಸಂಪತ್ಸುತಮುನಿಂ ಭಜೇ ॥

## ವಿದ್ವಾನ್ ಶ್ರೀ ಕೃಷ್ಣಕುಮಾರ ಯತಿರಾಜ ಜೀಯರ್ ಸ್ವಾಮಿಗಳು
### (ಆಶ್ರಮ ಸ್ವೀಕಾರ ೧೭–೪–೧೯೪೪)

ಇವರು ಪಾರ್ಥಿವ ಸಂವತ್ಸರ ಧನುರ್ಮಾಸ ರೇವತೀನಕ್ಷತ್ರದಲ್ಲಿ ಮೇಲುಕೋಟೆಯಲ್ಲಿ ಅವತರಿಸಿದರು. ಈ ಸ್ವಾಮಿಗಳ ಹಿರಿಯರ ಪೂರ್ವಸ್ಥಳ ಘಟಿಕಾಚಲ, ಮತ್ತು ಕಾರ್ಪಂಕಾಡು. ಮೂಲಪುರುಷರು ವಾಧೂಲ ಕಂದಾಡೈ ತೋಳಪ್ಪರ್ ಎಂಬುವರು. ಬಹಳ ಹಿಂದೆಯೇ ಇವರ ಹಿರಿಯರು ತಿರುನಾರಾಯಣಪುರಕ್ಕೆ ದಯಮಾಡಿಸಿ ಈ ದೇಶೀಯರ ಸಂಬಂಧ ಬೆಳೆಯಿಸಿ ಇಲ್ಲಿಯೇ ನೆಲೆಸಿದರು. ಇವರ ಬಂಧುಗಳು ಕಾರ್ಪಂಕಾಡಿನಲ್ಲಿ ಈಗಲೂ ಇದ್ದಾರೆ. ಇವರು ನಾರಾಯಣಪಟ್ಟದವರು. ಇವರು ಮೇಲುಕೋಟೆ ಸಂಸ್ಕೃತ ಪಾಠಶಾಲಾಧ್ಯಕ್ಷರಾಗಿದ್ದ ಶ್ರೀ॥ ಉ॥ ಪಂಡಿತರತ್ನಂ ಕುಪ್ಪಣ್ಣ ಸ್ವಾಮಿಗಳವರಲ್ಲಿ ಸಾಹಿತ್ಯ, ವೇದಾಂತ ಸಂಪ್ರದಾಯ ಗ್ರಂಥಗಳನ್ನು

ಅಧಿಕರಿಸಿ ವೇದಾಂತಶಾಸ್ತ್ರದಲ್ಲಿ ಪಂಡಿತರಾದರು. ಕೆಲವುಕಾಲ ಸಂಸ್ಕೃತ ವಿದ್ಯಾಪ್ರವಚನ ನಡೆಯಿಸಿದ ಅನಂತರ ಶ್ರೀರಂಗದಲ್ಲಿ ಕೋಯಿಲ್ ಕಂದಾಡೈ ಅಣ್ಣನ್ ಸ್ವಾಮಿಗಳವರ ತಿರು ಮಾಳಿಗೆಯಲ್ಲಿ ಪಾಠಪ್ರವಚನ ಮಾಡುತ್ತಾ ಸದಾಚಾರಶೀಲರಾಗಿ ದಯಮಾಡಿಸಿದ್ದರು.

ಶ್ರೀ ಮಠದ ಶಿಷ್ಯಾಭಿಮಾನಿಗಳ ಪ್ರಾರ್ಥನೆಯಿಂದ ಶ್ರೀ ಯತಿರಾಜ ಮಠದಲ್ಲಿ ಶ್ರೀ ತಾರಣ ಸಂವತ್ಸರ (ಕ್ರಿ. ಶ. ೧೭-೪-೧೯೪೪) ಶುಭದಿವಸ ವೇದಪುಷ್ಕರಿಣಿ ದತ್ತಾತ್ರೇಯಪೀಠದಲ್ಲಿ ತುರೀಯಾಶ್ರಮವನ್ನು ಸ್ವೀಕರಿಸಿ ಶ್ರೀ ಯತಿರಾಜ ಮಠದಲ್ಲಿ ದಿವ್ಯಪೀಠವನ್ನು ಅಲಂಕರಿಸಿದರು. ಬೆಂಗಳೂರಿನ ಮಲ್ಲೇಶ್ವರಂ ನಿವೇಶನಗಳಲ್ಲಿ ಶ್ರೀಮಠದ ಕಟ್ಟಡಗಳು ಇವರ ಕಾಲದಲ್ಲಿ ಅಭಿವೃದ್ಧಿಯಾಗಿವೆ.

**ಇವರ ತನಿಯನ್—**

ಶ್ರೀಮತ್ಕೃಷ್ಣ ಕುಮಾರವಂಶಜಮುನಿಂ ವಾಧೂಲಗೋತ್ರೋದ್ಭವಂ
ನಾಮ್ನಾ ಶ್ರೀ ತಿರುವೇಂಕಟಾರ್ಯಮನಘಂ ಪ್ರಾಪ್ತಾಗಮಾಂತದ್ವಯಂ।
ಯದ್ವದ್ಭ್ರಾ ಯತಿರಾಜಪೂಜಕಮಠೇ ಸಂಪ್ರಾಪ್ತ ತುರ್ಯಾಶ್ರಮಂ
ಶ್ರೀನಾರಾಯಣ ಲಕ್ಷ್ಮಣಾರ್ಯ ಯಮಿನಂ ಸೇವೇ ಸದಾ ಸಾದರಂ ॥

ಪಾರ್ಥಿವಾಬ್ದೇ ಧನುರ್ಮಾಸ ರೇವತ್ಯಾಮಾಹಿತೋದಯಂ।
ನಾರಾಯಣ ಸದಾಶ್ಲಿಷ್ಟ ರಾಮಾನುಜಗುರುಂ ಭಜೇ ॥

॥ ಶ್ರೀಮತೇ ರಾಮಾನುಜಾಯ ನಮಃ ॥

# ಶ್ರೀ ಯದುಗಿರಿ ಯತಿರಾಜ ಮಠದ ಕೆಲವು ಜೀಯರ್ ಸ್ವಾಮಿಗಳು

| ತಿರುನಾಮವು | ಆಶ್ರಮ ಸ್ವೀಕಾರ | ಪರಮಪದಿಸಿದ ಕಾಲ | ಪರಮಪದಿಸಿದ ಸ್ಥಳ | ತಿರುನಕ್ಷತ್ರ |
|---|---|---|---|---|
| | ಕ್ರಿ. ಶ. | ಕ್ರಿ. ಶ. | | |
| ಶ್ರೀರಾಮಾನುಜಾಚಾರ್ಯರು | | ೧೧೩೭ | ಶ್ರೀರಂಗಮ್ | ಆರ್ದ್ರಾ |
| ಶ್ರೀ ದೇಶಾದ್ರಿ ಕೇಳ್ವಿ ತಿರುನಾರಾಯಣ ರಾಮಾನುಜ ಜೀಯರ್ ಸ್ವಾಮಿಗಳು | ೧೧೦೩ | ೧೧೩೯ | ತಿರುನಾರಾಯಣಪುರಂ | |
| ಶ್ರೀ ತಿರುನಾರಾಯಣ ಜೀಯರ್ ಸ್ವಾಮಿಗಳು | ೧೧೩೯ | ೧೧೮೭ | ತಿರುನಾರಾಯಣಪುರಂ | |
| ಶ್ರೀ ಯತಿರಾಜ ಜೀಯರ್ ಸ್ವಾಮಿಗಳು | ೧೧೮೭ | ೧೨೨೧ | ತಿರುನಾರಾಯಣಪುರಂ | |
| ಶ್ರೀ ಯದುಗಿರಿ ನಾರಾಯಣ ಜೀಯರ್ ಸ್ವಾಮಿಗಳು | ೧೨೨೧ | —? | ತಿರುನಾರಾಯಣಪುರಂ | |
| ಶ್ರೀ ರಾಮಾನುಜ ಜೀಯರ್ ಸ್ವಾಮಿಗಳು | ೧೪೫೮ರಲ್ಲಿ ಪಟ್ಟದಲ್ಲಿದ್ದರು | | | |
| ಶ್ರೀ ವೇದಾಂತಿ ರಾಮಾನುಜಮುನಿ ಸ್ವಾಮಿಗಳು | ೧೫೨೫ | ೧೫೭೫ | | ವೃಷಭಮಾಸ, ಪುಷ್ಯ |
| ಶ್ರೀ ಕುಣಿಗಲ್ ಸ್ವಾಮಿಗಳು (ಬಹುಕುಟುಂಬಿ ಸ್ವಾಮಿಗಳು) | —? | ೧೮೨೩ | ತಿರುನಾರಾಯಣಪುರಂ | |
| ಶ್ರೀ ತೊಂಡನೂರು ಪ್ರತಿವಾದಿ ಭಯಂಕರಂ ಶಿಂಗ್ರೈಯ್ಯಂಗಾರ್ ಸ್ವಾಮಿಗಳು | ೧೮೨೩ | ೨೦–೧೨–೧೮೩೯ | ತಿರುನಾರಾಯಣಪುರಂ | ಕನ್ನಿ, ಸ್ವಾತಿ |
| ಶ್ರೀ ತಿಟ್ಟಮೇಲ್ ಅನನ್ತಾಳ್ವಾರ್ ಸ್ವಾಮಿಗಳು | ೧೯–೧೨–೧೮೩೯ | ೧೮೪೯ | ತಿರುನಾರಾಯಣಪುರಂ | ಕುಂಭಮಾಸ, ಚಿತ್ರಾ |
| ಶ್ರೀ ಛಾಂದೋಗ್ಯಂ ಕುಪ್ಪನೈಯ್ಯಂಗಾರ್ ಸ್ವಾಮಿಗಳು | ೧೮೪೯ | [illegible] | | [illegible] |

| | | | | |
|---|---|---|---|---|
| ಶ್ರೀ ನಾಟೇರಿ ವರದಾಚಾರ್ಯ ಸ್ವಾಮಿಗಳು (ಚಿನ್ನ ಸ್ವಾಮಿಗಳು) | ೧೮೩೪ | ೧೮೯೦ | ರೇವಾ, ಗೋವಿಂದಘಡ | ಕುಂಭ, ರೇವತಿ |
| ಶ್ರೀ ಮುದಿಗುಂಬಂ ಸ್ವಾಮಿಗಳು (ಕೃಷ್ಣಯ್ಯನ್ ವೆಂಕಟಾಚಾರ್ಯ ಸ್ವಾಮಿಗಳು) | ೧೮೬೭ | ೧೭-೬-೧೮೭೪ | ತಿರುನಾರಾಯಣಪುರಂ | ಮಿಥುನಂ, ಭರಣಿ |
| ಶ್ರೀ ಪೆರಿಯಕುಮಾರ ಶಿಂಗ್ರಾಚಾರ್ಯ ಸ್ವಾಮಿಗಳು (ದೊಡ್ಡ ಸ್ವಾಮಿಗಳು) | ೧೭-೬-೧೮೭೪ | ೨೫-೬-೧೯೭೬ | ತಿರುನಾರಾಯಣಪುರಂ | ಮಿಥುನಂ, ಪೂರ್ವಾಭಾದ್ರ |
| ಶ್ರೀ ನಾಟಂಪಳ್ಳಿ ಅಳಹಿಯ ಶಿಂಗರಾಚಾರ್ಯ ಸ್ವಾಮಿಗಳು | ೧೮೭೬ | ೧೮೮೬ | ಶ್ರೀ ಕೂರ್ಮ | ಕರ್ಕಾಟಕಂ, ಪೂರ್ವಾಭಾದ್ರ |
| ಶ್ರೀ ನಾಟಂಪಳ್ಳಿ ತಿರುನಾರಾಯಣ ಪೆರುಮಾಳ್ ಸ್ವಾಮಿಗಳು | ೧೮೮೬ | ೫-೮-೧೮೮೭ | ನಾಗಪುರ | ಮಿಥುನಂ, ಆರಿದ್ರಾ |
| ಶ್ರೀ ಜೀಯರ್ ಸನ್ನಿಧಿ ತಿರುಮಲಾಚಾರ್ಯ ಸ್ವಾಮಿಗಳು | ೧೮೭೭ | ೨೮-೧೦-೧೯೦೧ | ಗೋವಿಂದಘಡ | ಕರ್ಕಾಟಕಂ, ಸ್ವಾತಿ |
| ಶ್ರೀ ಚಿನ್ನಕುಮಾರ ಶಿಂಗ್ರಾಚಾರ್ಯ ಸ್ವಾಮಿಗಳು | ೨೫-೧-೧೯೦೨ | ೨೬-೧೧-೧೯೦೭ | ತಿರುನಾರಾಯಣಪುರಂ | ವೃಷಭಂ, ಅನೂಷಂ |
| ಶ್ರೀ ಕುಟ್ಟಿಯತ್ತಂಬಿ ದಾಮೋದರಂ ಅಳಕಿಯ ಶಿಂಗರಾಚಾರ್ಯ ಸ್ವಾಮಿಗಳು | ೧೨-೭-೧೯೦೮ | ೧೩-೬-೧೯೧೫ | ತಿರುನಾರಾಯಣಪುರಂ | ಮೇಷಂ, ಶತಭಿಷೆ |
| ಶ್ರೀ ಕೋಪೆ ವೆಂಕಟಾಚಾರ್ಯ ಸ್ವಾಮಿಗಳು | ೧೨-೭-೧೯೧೫ | ೩-೭-೧೯೧೭ | ತಿರುನಾರಾಯಣಪುರಂ | ಮಿಥುನಂ, ಸ್ವಾತಿ |
| ಶ್ರೀ ಆಸೂರಿ ಅನನ್ತಾಳ್ವಾರ್ ಸ್ವಾಮಿಗಳು | ೧೧-೨-೧೯೩೧ | ೧೭-೩-೧೯೪೫ | ತಿರುನಾರಾಯಣಪುರಂ | ಕುಂಭಮಾಸಂ, ಅನುರಾಧಾ |

# ಪ್ರಕರಣ ೭

## ಕೆಲವು ಧರ್ಮಗಳು

ಬಹಳ ಹಿಂದಣ ಕಾಲದಿಂದಲೂ ನಮ್ಮ ಹಿರಿಯರು ಅನೇಕ ಧರ್ಮ ಕೆಲಸಗಳನ್ನು ಮಾಡಿರುವರು. ಆದರೂ ಅನೇಕರು ತಾವು ಮಾಡಿದ ಕಾರ್ಯಗಳ ಪ್ರಶಂಸೆಯನ್ನು ಮಾಡಿಕೊಂಡಿಲ್ಲ. ಮಾಡುವ ಧರ್ಮವೆಲ್ಲಾ 'ಭಗವತ್ಕೈಂಕರ್ಯ ರೂಪ'ವೆಂದೇ ಅವರು ಭಾವಿಸಿದ್ದರು. ಅವರವರ ಸಮಕಾಲಿಕರೂ ಅವರಿಂದ ಈಚಿನವರೂ ಅಲ್ಲಲ್ಲಿ ಹೊಗಳಿದ್ದಾರೆ. ಮತ್ತೆ ಕೆಲವರು ಚರಿತ್ರೆಯನ್ನು ಉಳಿಸುವುದಕ್ಕಾಗಿಯೂ, ಇತರರಿಗೆ, ಮಾರ್ಗದರ್ಶನಕ್ಕಾಗಿಯೂ, ತಮ್ಮ ಹಿರಿಯರ ಗೌರವಾರ್ಥವಾಗಿಯೂ ಶಾಸನಗಳನ್ನು ಸ್ಥಾಪಿಸಿದ್ದಾರೆ. ಕ್ರಿ. ಶ. ೧೫ ನೇ ಶತಮಾನದಿಂದ ಈಚೆಗೆ ತಿಳಿದುಬಂದ ಕೆಲವು ಧರ್ಮ ಕಾರ್ಯಗಳನ್ನು ಇಲ್ಲಿ ವಿಜ್ಞಾಪಿಸಿದೆ. ಇನ್ನೂ ಅನೇಕ ವಿಷಯಗಳು ಸಂಗ್ರಹವಾಗಬೇಕಾಗಿವೆ.

೧. ಶ್ರೀರಂಗಪಟ್ಟಣದಲ್ಲಿ ವಿಜಯನಗರದ ವೈಸ್‌ರಾಯರಾಗಿ 'ಶ್ರೀರಂಗರಾಯ'ನೆಂಬ ಅಧಿಕಾರನಾಮವಿದ್ದವರಿಗೆ ಕ್ರಿ. ಶ. ೧೫ ನೇ ಶತಮಾನದಲ್ಲಿ ಮಂತ್ರಿಗಳಾಗಿ ನಾಗಮಂಗಲಾಧಿಪತಿಯಾಗಿದ್ದ ಶ್ರೀ|| ತಿಮ್ಮಣ್ಣದಂಡನಾಯಕರು (ತಿರುಮಲಾಚಾರ್ಯರು) ಶ್ರೀ ರಾಮಾನುಜರಿಂದೀಚೆಗೆ ಅಳಿಸಿಹೋಗುತ್ತಿದ್ದ ತಿರುನಾರಾಯಣಪುರವನ್ನು ಜೀರ್ಣೋದ್ಧಾರಮಾಡಿದರು. ತಿರುನಾರಾಯಣಪುರದ ಶಾಸನ ಒಂದರಲ್ಲಿ (ಕ್ರಿ. ಶ. ೧೪೫೮) ತಮ್ಮನ್ನು "ಯಾದವಗಿರಿ ಜೀರ್ಣೋದ್ಧಾರಕ" ಎಂದು ಕರೆದುಕೊಂಡಿದ್ದಾರೆ. ನಮಗೆ ಸ್ವಲ್ಪ ಹೆಚ್ಚು ಕಡಿಮೆ ಈಗ ಇರುವಂತೆ ತಿರುನಾರಾಯಣಪುರದ ದೇವಸ್ಥಾನ ಇತ್ಯಾದಿಗಳನ್ನು ಒದಗಿಸಿ ಪುಣ್ಯವನ್ನು ಗಳಿಸಿದ ಮಹಾತ್ಮರಿವರು. ಶ್ರೀರಂಗಪಟ್ಟಣದ ತಾಲ್ಲೋಕು ೮೯ ನೇ ನಂಬರ್ ಶಾಸನದಲ್ಲಿ ವಿವರಗಳನ್ನು ಪರಾಂಬರಿಸಬಹುದು.

೨. ಕ್ರಿ. ಶ. ೧೬೭೬ ರಲ್ಲಿ ಪ್ರಸಿದ್ಧ ಚಿಕ್ಕದೇವರಾಜ ಒಡೆಯರವರು ಪ್ರಧಾನ ತಿರುಮಲೈಯ್ಯಂಗಾರ್ಯರ ಮಕ್ಕಳಾದ ಪ್ರಧಾನ ಅಪ್ಪಾಜಯ್ಯನವ

ರಿಗೆ ಮಂತ್ರಿಪದವಿಯನ್ನು ಅಂಗೀಕರಿಸುವಂತೆ ತಿಳಿಸಿದುದೂ, ಪ್ರಧಾನ ಅಪ್ಪಾಜಯ್ಯನವರು ತಮ್ಮ ಮಗಳ ಮಗನಾದ ತಿರುಮಲೈಯ್ಯಂಗಾರ್ಯನನ್ನು ಮಂತ್ರಿಯಾಗಿ ನೇಮಕಮಾಡಿಸಿದುದೂ ಹಿಂದೆಯೇ ನಿರೂಪಿತವಾಗಿದೆ. ಈ ಪ್ರಸಿದ್ಧ ಮಂತ್ರಿ ತಿರುಮಲೈಯ್ಯಂಗಾರ್ಯರು ಮೇಲುಕೋಟೆಗೆ ಹೋಗುವ ದಾರಿಯಲ್ಲಿ ಕೆರೆ, ಗ್ರಾಮ, ಛತ್ರಗಳನ್ನು ಕಟ್ಟಿಸಿ ಕೀರ್ತಿಯನ್ನು ಗಳಿಸಿದರು; ತಿರುಮಲಸಾಗರ, ತಿರುಮಲಸಾಗರಛತ್ರ, ದೇವಸ್ಥಾನ ಇತ್ಯಾದಿ. ಹಿಂದೆ ತಿರುಮಲಸಾಗರದಲ್ಲಿ ಪ್ರತಿಷ್ಠಿತರಾಗಿದ್ದ ಶ್ರೀನಿವಾಸದೇವರು ಈಗ ಮೈಸೂರು ವಾಣೀವಿಲಾಸಮೊಹಲ್ಲಾದಲ್ಲಿ ನೂತನವಾಗಿ ಕಟ್ಟಿರುವ ದೇವಸ್ಥಾನದಲ್ಲಿ ಬಿಜಯಮಾಡಿ ಆರಾಧನೆಯನ್ನು ಸ್ವೀಕರಿಸುತ್ತಿದ್ದಾರೆ.

೩. ಕ್ರಿ. ಶ. ೧೮೧೦ ರಲ್ಲಿ ಪ್ರಧಾನ ತಿರುಮಲರಾಯರು ಮಂಡಯದ ಪೂರ್ವದಿಕ್ಕಿನಲ್ಲಿ ಶ್ರೀ ಲಕ್ಷ್ಮೀಜನಾರ್ದನ ಸ್ವಾಮಿಯವರ ದೇವಸ್ಥಾನದ ಉಪಯೋಗಕ್ಕಾಗಿ ಕೊಳ, ತೋಪು, ಮಂಟಪ ಇವನ್ನು ನಿರ್ಮಿಸಿ ಶಾಸನಗಳನ್ನಿಟ್ಟಿರು, ತಮ್ಮ ತಂದೆ ಗೋವಿಂದರಾಜಯ್ಯನವರ ಹೆಸರಿನಲ್ಲಿ ಗೋವಿಂದ ರಾಜ ಪುಷ್ಕರಿಣಿ, ಗೋವಿಂದರಾಜೋದ್ಯಾನ ಎಂಬ ನಾಮಕರಣದಿಂದ.

೪. ರಾಮಾನುಜಪುರದಲ್ಲಿ ಒಂದು ಕೊಳ, ಮಂಡಯದ ಪಶ್ಚಿಮದಿಕ್ಕಿನಲ್ಲಿ ದೇವಸ್ಥಾನಕ್ಕಾಗಿ ಒಂದು ಕೊಳ, ಮತ್ತು ತೋಪು, ತಿರುನಾರಾಯಣಪುರದಲ್ಲಿ ಒಂದು ಕೊಳ ಇವೆಲ್ಲಾ 'ಶಿಂಗ್ರೈಯ್ಯಂಗಾರ್ ಕೊಳಗಳೆ'ಂದು ಪ್ರಖ್ಯಾತಿಯಾಗಿವೆ. ಈ ಗ್ರಂಥವನ್ನು ಬರೆದ ಜಟಾವಲ್ಲಭ ಶಿಂಗ್ರೈಯ್ಯಂಗಾರ್ಯನ ಹಿಂದಣ ಹಿರಿಯವರಿವರೆಂದು ತಿಳಿಯಬರುತ್ತದೆ. ತೀರ್ಮಾನವಾಗಿ ಹೇಳಲು ಸಾಧ್ಯವಿಲ್ಲ. ಕ್ರಿ. ಶ. ೧೮[illegible] ಬಹಳ ಹಿಂದೆಯೇ ಎಂದು ಹೇಳಬಹುದಾಗಿದೆ.

೫. ಶ್ರೀ|| ಉ|| ಯೋಗೀ ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರೂ, ಇವರ ಧರ್ಮಪತ್ನಿಯವರೂ ಅಯೋಧ್ಯೆಯಲ್ಲಿ ಶ್ರೀರಾಮ ದೇವಸ್ಥಾನವನ್ನು, ಹೊಸದಾಗಿ ನಿರ್ಮಿಸಿ ಅಸಾಧಾರಣವಾದ ಖ್ಯಾತಿಯನ್ನು ಗಳಿಸಿದ್ದಾರೆ.

೬. ಕ್ರಿ. ಶ. ೧೮೭೫ ರ ಸುಮಾರಿನಲ್ಲಿಯ ವಿಷಯ. ಈ ಗ್ರಂಥವನ್ನು ಬರೆದವನ ತಂದೆ ಶ್ರೀ|| ಉ|| ಜಟಾವಲ್ಲಭ ತಿರುಮಲೈಯ್ಯಂಗಾರ್ಯರು ಮಂಡಯದಲ್ಲಿ ಒಂದು ಸಂಸ್ಕೃತಪಾಠಶಾಲೆಯನ್ನು ಸ್ಥಾಪಿಸಿ ಹನ್ನೆರಡುವರ್ಷ ಗಳ ಕಾಲ ಸ್ವಂತ ಖರ್ಚಿನಿಂದ ನಡೆಯಿಸಿದರು. ಇಲ್ಲಿ ಅನೇಕರು ವಿದ್ಯಾವಂತ ರಾದರು. ಹಿಂದಣ ಶ್ರೀ ಯದುಗಿರಿ ಯತಿರಾಜಜೀಯರ್ ಸ್ವಾಮಿಗಳಾಗಿದ್ದ ಶ್ರೀ|| ಉ|| ಆಸೂರಿ ಅನಂತಾಳ್ವಾರ್ ಸ್ವಾಮಿಗಳವರು ಈ ಪಾಠಶಾಲೆಯ ವಿದ್ಯಾರ್ಥಿ. ಶ್ರೀ|| ಉ|| ಜಗ್ಗು ಶಿಂಗ್ರೈಯ್ಯಂಗಾರ್ಯ ಸ್ವಾಮಿಗಳವರನ್ನು ಮಂಡಯಕ್ಕೆ ಕರೆಯಿಸಿ ಸುಮಾರು ಹನ್ನೆರಡು ವರ್ಷಗಳ ಕಾಲ ಪಾಠಶಾಲೆ ಯನ್ನು ನಡೆಸಿ ಯಶಸ್ವಿಗಳಾದರು.

೭. ಶ್ರೀ|| ಉ|| ಅಣ್ಣಾ ಘೊರೆ ತಿರುನಾರಣೈಯ್ಯಂಗಾರ್ಯರು [ಸ್ವಾಮಿ ಶ್ರೀ ವಾಸಾನಂದ ಸ್ವಾಮಿಗಳವರ ತಾತಂದಿರು] ಮಂಡಯದ ಶ್ರೀ ಲಕ್ಷ್ಮೀ ಜನಾರ್ದನ ಸ್ವಾಮಿಯವರ ದೇವಸ್ಥಾನದ ಹೊರಗಣ ಪ್ರಾಕಾರದ ಕೋಟೆ ಯನ್ನು ಎತ್ತರಿಸಿ ಕಟ್ಟಿಸಿದರೆಂದು ಹೇಳುತ್ತಾರೆ.

೮. ಮದ್ರಾಸ್ ತಿರುವಲ್ಲಿಕ್ಕೇಣಿಯಲ್ಲಿ **"ವೇದವೇದಾಂತ ವರ್ಧಿನೀ"** ಎಂಬ ಸಂಘ ಒಂದನ್ನು ನಮ್ಮ ಸಮುದಾಯದ ಕೆಲವು ಹಿರಿಯ ಮಹ ನೀಯರು ಮದ್ರಾಸಿನಲ್ಲಿ ಪ್ರಮುಖರಾಗಿದ್ದ ಕೆಲವು ವರ್ತಕ ಮತ್ತು ಇತರ ಮಹಾಶಯರನ್ನು ಸೇರಿಸಿ ಪ್ರಾರಂಭಿಸಿದರು. ಸುಮಾರು ೧೫ ವರ್ಷಗಳ ಕಾಲ ಯಶಸ್ವಿಯಾಗಿ ನಡೆಯಿಸಿ, ಖ್ಯಾತಿಯನ್ನು ಗಳಿಸಿದ ಮೇಲೆ ಈ ಸಂಘವು ೨೬—೧೧—೧೮೮೮ ರಲ್ಲಿ ರಿಜಿಸ್ಟರಾಗಿದೆ. ತೆಲುಗು ಭಾಷೆಯಲ್ಲಿ ಸಂಘದ ಉದ್ದೇಶ್ಯವೂ ನಿಬಂಧನೆಗಳೂ ಅಚ್ಚುಮಾಡಲ್ಪಟ್ಟಿವೆ. ಇದರ ಮಾದರಿಯು ಈಗಲೂ ಎಲ್ಲರೂ ಒಪ್ಪುವಂತೆ ಅಚ್ಚುಮೆಚ್ಚಾಗಿದೆ. ನಿರ್ವಾಹಸಭೆಯಲ್ಲಿ ಪ್ರಮುಖ ರಾಗಿದ್ದ ನಮ್ಮ ಸಮುದಾಯದ ಮಹನೀಯರಿವರು :—(೧) "ಶ್ರೀಮಾನ್ ಶ್ರೀ ಉ. ವೇ. ಮನ್ನಿ ಶಿಂಗರಾಚಾರ್ಯುಲು, ಮದ್ರಾಸ್ ಬ್ಯಾಂಕ್ ಹೆಡ್ ಕ್ಯಾಷ್ ಕೀಪರ್, ತಿರುವಲ್ಲಿಕ್ಕೇಣಿಲೋ ವಾಸಮು, (೨) ಶ್ರೀಮಾನ್ ಶ್ರೀ ಮ. ಅ. ಶಿಂಗರಾಚಾರ್ಯುಲು, ಡಿಪ್ಟೀ ಕ್ಯಾಷ್ ಕೀಪರ್, ತಿರುವಲ್ಲಿಕ್ಕೇ ಣಿಲೋ ವಾಸಮು, (೩) ಶ್ರೀಮಾನ್ ಶ್ರೀ ಉ. ವೇ. ಮ. ಅ. ತಿರುನಾರಾ

ಯಣಾಚಾರ್ಯುಲು, ಹೈಕೋರ್ಟು ವಕೀಲ್, ತಿರುವಲ್ಲಿಕ್ಕೇಣಿಲೋ ವಾಸಮು, (4) ಶ್ರೀಮನ್ ಶ್ರೀ ಉ. ವೇ. ಮ. ಆಸೂರಿ ಪಾರ್ಥಸಾರಥಿ ಐಯ್ಯಂಗಾರ್, ಹೈಕೋರ್ಟ್ ಅಡ್ವಕೇಟ್, ತಿರುವಲ್ಲಿಕ್ಕೇಣಿಲೋ ವಾಸಮು.

ಈ ಸಂಘದ ಉದ್ದೇಶವು: "ತಿರುವಲ್ಲಿಕ್ಕೇಣಿ ಶ್ರೀಪಾರ್ಥಸಾರಥಿಸ್ವಾಮಿ ಸನ್ನಿಧಿಯೊಕ್ಕ ಪ್ರಕೃತಸಂಪ್ರದಾಯನುಸಾರಮುಗನೇ ಉಭಯ ವೇದಾಂತ ಮುಲನು ವದಂಗಂಬುಲನು ಪಾಠಶಾಲಾದುಲನೇರ್ಪರಚಿ ಪ್ರವಚನಮು ಚೇಯಿಂಚುಟಯು ತದಭಿವೃದ್ಧಿ ಕಾವಶ್ಯಕಂಬಗು ಯಾವತ್ಕಾರ್ಯಂಬುಲನು ಜಂತಿಂಚಿ ನಡಿಪಿಂಚುಟಯುಮಾತ್ರಮೇ."

೯. ಕ್ರಿ. ಶ. 1913 (14–7–1913)ರಲ್ಲಿ ಶ್ರೀ|| ಉ|| ದಿವಾನ್ ಬಹದ್ದೂರ್, ಎಂ. ಓ ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರು ಒಂದು ಲಕ್ಷ ರೂಪಾಯಿಗಳ ಧರ್ಮವನ್ನುಮಾಡಿ ಶಾಸನವನ್ನು ಬರೆದಿರವರು ಈ ಹಣದ ವೃದ್ಧ್ಯಂಶದಲ್ಲಿ, (1) ಮತ್ತು ಇತರ ಧರ್ಮಗಳಗಲ್ಲದೆ ಮಂಡ ಯವಲ್ಲಿ ಉತ್ಸವಾದಿಗಳಿಗೆ ಪ್ರತಿವರ್ಷವೂ 70 ರೂಪಾಯಿಗಳು, (2) ಮಂಡ ಯದ ಸಮುದಾಯದ ವಿದ್ಯಾರ್ಥಿಗಳಿಗಾಗಿ ಪ್ರತಿವರ್ಷವೂ 500 ರೂಪಾಯಿ ಗಳೂ, ಮತ್ತು 3) ಮಂಡಯದ ಸಮುದಾಯದಲ್ಲಿ ಬಡವರಾದವರಿಗೆ ಆವಶ್ಯಕ ವಿವಾಹಗ ಸಹಾಯ ಮಾಡಲು 200 ರೂಪಾಯಿಗಳೂ ಮೀಸಲಾಗಿಡಲ್ಪಟ್ಟಿವೆ. ಈ ಮಹಾನುಭಾವರು ಧರ್ಮ ಮಾಡಿದ ಸುಮುಹೂರ್ತವೇ ಈ ಶತ ಮಾನದಲ್ಲಿ ನಮ್ಮ ಸಮುದಾಯದ ಮಹಾಜನಗಳ ಮಹಾಸಭೆಗಳು ನಡೆಯು ವುದಕ್ಕೆ ಕಾರಣವಾಯಿತು. 1923ರಲ್ಲಿ ಪುನಃ ಒಂದು ಲಕ್ಷ ರೂಪಾಯಿ ಗಳನ್ನು ದಾನ ಮಾಡಿದರು. ಈಚೆಗೆ ಧರ್ಮಕಾರ್ಯಗಳು ಬಹುಮಟ್ಟಿಗೆ ವೃದ್ಧಿಯಾಗಿವೆ.

10. ಅಯೋಧ್ಯೆ ಶ್ರೀರಂಗಮ್ಮನವರು ಶ್ರೀರಂಗಪಟ್ಟಣದಲ್ಲಿ ಶ್ರೀ ಯತಿರಾಜಮಠವನ್ನು ಕಟ್ಟಿಸಿ ನಿತ್ಯಕಟ್ಟಲೆ ಕೈಂಕರ್ಯವೂ, ಹೆಚ್ಚುಕಟ್ಟಲೆ ಯಾಗಿ ವೈರಮುಡಿ ಉತ್ಸವ ಕಾಲದಲ್ಲಿಯೂ, ತುಲಾಮಾಸ ಕಾಲದಲ್ಲಿಯೂ ಬಿಜಮಾಡಿಸುವ ಶ್ರೀವೈಷ್ಣವ ಮಹಾಜನಗಳಿಗೆ ತದೀಯಾರಾಧನೆ ನಡೆಯು

ವಂತೆ ಏರ್ಪಡಿಸಿರುವರು. ಶ್ರೀ ಶ್ರೀರಂಗಮ್ಮನವರು 'ಮೊಷ್ಡಮನೆ'ಯವರ ಮಗಳು. ಇವರು ಶ್ರೀ|| ಉ|| ಶ್ರೀ ಯೋಗೀ ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರಲ್ಲಿಯೂ, ಅವರ ಪತ್ನಿ ಶ್ರೀ ಶಿಂಗಮ್ಮನವರಲ್ಲಿಯೂ ಜ್ಞಾನಾರ್ಜನೆಯನ್ನು ಮಾಡಿದರು. ಶ್ರೀರಂಗಮ್ಮನವರು ಪರಮಪದಿಸಿದ ಅನಂತರ ಶ್ರೀಮದಿತ್ಯಾದಿ ಭಾಷ್ಯಾಚಾರ್ ಸ್ವಾಮಿಗಳ ಮಗಳು ಶ್ರೀ ಶ್ರೀರಂಗ ನಾಯಕಮ್ಮನವರು ಈ ಮಹತ್ಕಾರ್ಯವಲ್ಲಿ ಅನ್ವಯಿಸಿದ್ದಾರೆ.

೧೧. ತಿರುನಾರಾಯಣಪುರದಲ್ಲಿ ಶ್ರೀಮದಿತ್ಯಾದಿ ವಿಶಾಮಿ ಶ್ರೀನಿವಾಸಯ್ಯಂಗಾರ್ಯರು ಮಾಡಿರುವ ಧರ್ಮಕಾರ್ಯವನ್ನು ಎಷ್ಟು ಹೊಗಳಿದರೂ ಸಾಲದುದಾಗಿದೆ. ಅಷ್ಟತೀರ್ಥ ರಥೋತ್ಸವದಲ್ಲಿ ತಿರುನಾರಾಯಣಪುರದ ಬೆಟ್ಟದ ದಾರಿಯಲ್ಲಿ ಎಂಟು ಮಹಾತೀರ್ಥಗಳಿಗೂ ದೇವರು ಬಿಜಯಮಾಡಿಸುತ್ತಾರೆ. ನಾಲ್ಕಾರು ಮೈಲಿಗಳ ಈ ದಾರಿಯು ಬಹಳ ಕಷ್ಟತರವಾಗಿತ್ತು. ಈ ದಾರಿಗೆಲ್ಲಾ ಶ್ರೀಮದಿತ್ಯಾದಿ ವಿಶಾಮಿ ಶ್ರೀನಿವಾಸೈಯ್ಯಂಗಾರ್ ಸ್ವಾಮಿಗಳು ಸ್ವಂತ ದೇಹಶ್ರಮದಿಂದಲೂ ಸ್ವಲ್ಪಮಟ್ಟಿಗೆ ಇತರರ ಸಹಾಯದಿಂದಲೂ ಬೆಟ್ಟದ ಕಲ್ಲುಗಳನ್ನು ಹಾಸಿ, ದೇವರ ಉತ್ಸವಕ್ಕೆ ಸುಗಮವಾದ ಶಾಶ್ವತವಾದ ದಾರಿಯನ್ನು ನಿರ್ಮಿಸಿದ್ದಾರೆ. ಇದಕ್ಕಾಗಿ ವರ್ಷಗಟ್ಟಲೆ ದುಡಿದಿರುವ ಮಹಾನುಭಾವರಿವರು. ಈಗಿನಕಾಲದಲ್ಲಿ ಸುಮಾರು ಒಂದುಲಕ್ಷ ರೂಪಾಯಿನ ಬೆಲೆಬಾಳಬಹುದಾದ ಕೆಲಸವಿದೆಂದು ಕೆಲವು ಇಂಜನೀಯರ್‌ಗಳು ಅಭಿಪ್ರಾಯಪಟ್ಟಿದ್ದಾರಂತೆ. ಈ ಮಹಾನುಭಾವರ ಜ್ಞಾಪಕಾರ್ಥವಾಗಿ ತಿರುನಾರಾಯಣಪುರದಲ್ಲಿ ನಮ್ಮವರು ಏನಾದರೊಂದು ಶಾಶ್ವತವಾದ ಕೃತಜ್ಞತಾಪೂರ್ವಕವಾದ ಗುರುತನ್ನು ಏರ್ಪಡಿಸಬೇಕು.

೧೨. ಮಂಡಯದ ಪಶ್ಚಿಮ ಭಾಗದಲ್ಲಿರುವ ಶಿಂಗ್ರೈಯ್ಯಂಗಾರ್ ಕೊಳದ ದಂಡೆಯಲ್ಲಿ ಶ್ರೀ ಜನಾರ್ದನ ಸ್ವಾಮಿಯವರು ತೀರ್ಥಸ್ಥಾನಕ್ಕೆ ಬಿಜಯಮಾಡಿಸುವುದಕ್ಕಾಗಿ ಒಂದು ಮಂಟಪವನ್ನು ಶ್ರೀಮದಿತ್ಯಾದಿ ಬೂದನೂರು ಆನಂದಾಳ್ವಾರ್ಯರ ಹಿರಿಯರು ನಿರ್ಮಾಣಮಾಡಿದ್ದಾರೆ. ಈಗ ವರ್ಷಂಪ್ರತಿ ದೇವರನ್ನು ಅಲ್ಲಿಗೆ ಬಿಜಯಮಾಡಿಸಿ ತದೀಯಾರಾಧನೆಯನ್ನು ನಡೆಯಿಸುತ್ತಿದ್ದಾರೆ.

೧೩. ಕ್ರಿ. ಶ. ೧೯೨೭ (೫–೧೨–೧೯೨೭) ರಲ್ಲಿ ಶ್ರೀಮದ್ವೇದಮಾರ್ಗೇತ್ಯಾದಿ ಎಂ. ಎ. ಅಪ್ಪಳಾಚಾರ್ ಸ್ವಾಮಿಗಳು ಒಂದು ದಾನಶಾಸನವನ್ನೇರ್ಪಡಿಸಿ, ಮಂಡಯಂ ಸಮುದಾಯಕ್ಕೆ ಮಹೋಪಕಾರವನ್ನು ಮಾಡಿರುವರು. ತಿರುನಾರಾಯಣಪುರದ ದೇವಸ್ಥಾನದಲ್ಲಿ ಶ್ರೀಮದಿತ್ಯಾದಿ ಅಪ್ಪಳಾಚಾರ್ ಸ್ವಾಮಿಗಳ ಆಚಾರ್ಯರೂ ತಂದೆಯವರೂ ಆದ ಶ್ರೀಮದ್ವೇದಮಾರ್ಗೇತ್ಯಾದಿ ಲಕ್ಷ್ಮೀತಾತಾಚಾರ್ಯ ಸ್ವಾಮಿಗಳವರ ತಿರುನಕ್ಷತ್ರದ ದಿವಸವೂ, ವೈರಮುಡಿ ಉತ್ಸವದ ಅನಂತರ ಮಹಾನೈವೇದ್ಯದ ದಿವಸವೂ ಕೈಂಕರ್ಯಗಳನ್ನು ಸ್ಥಿರವಾಗಿ ಏರ್ಪಡಿಸಿದ್ದಾರೆ. ಶ್ರೀ ರಾಮಾನುಜಾಚಾರ್ಯರ ವರ್ಷ ತಿರುನಕ್ಷತ್ರದ ಶಾತ್ತುಮರೈ ದಿವಸ ಕೈಂಕರ್ಯವನ್ನೂ ಏರ್ಪಡಿಸಿ ಇವೆಲ್ಲಕ್ಕೂ ಸ್ಥಿರಸ್ವತ್ತುಗಳನ್ನು ಧರ್ಮಮಾಡಿದ್ದಾರೆ.

ಅಲ್ಲದೆ ಮೈಸೂರಿನಲ್ಲಿ ಈ ಮಹಾತ್ಮರ ಪೋಷಣೆಯಲ್ಲಿಯೇ ಆದಿಯಿಂದಲೂ ಬೆಳೆದುಬಂದಿರುವ "ಮಂಡಯಂ ವಿದ್ಯಾರ್ಥಿನಿಲಯ"ದ ಖರ್ಚಿಗಾಗಿ ಶಾಶ್ವತವಾಗಿ ಸ್ಥಿರಸ್ವತ್ತುಗಳನ್ನು ಮೀಸಲಾಗಿಟ್ಟಿರುವರು. ಈ ಮಹಾನುಭಾವರೂ, ಶ್ರೀಮದಿತ್ಯಾದಿ ಕೋನೂರ್ ಶ್ರೀನಿವಾಸಯ್ಯಂಗಾರ್ ಸ್ವಾಮಿಗಳೂ ನಮ್ಮ ವಿದ್ಯಾರ್ಥಿ ನಿಲಯದ ಬೆಳವಣಿಗೆಗಾಗಿ ಅನೇಕ ವರ್ಷಗಳಕಾಲ ಮಹತ್ತರವಾದ ಸೇವೆಯನ್ನು ಸಲ್ಲಿಸಿ ಪುಣ್ಯವನ್ನು ಗಳಿಸಿದ್ದಾರೆ.

೧೪. ಕ್ರಿ. ಶ. ೧೯೩೬ (೧೭–೮–೧೯೩೬) ರಲ್ಲಿ ಶ್ರೀಮದಿತ್ಯಾದಿ ಎಂ.ಎ. ನಾರಣಯ್ಯಂಗಾರ್ಯರವರು (ಸ್ವಾಮಿ ಶ್ರೀವಾಸಾನಂದ ಸ್ವಾಮಿಗಳು) ಮಂಡಯಂ ಅಣ್ಣಾಥೊರೆ ಧರ್ಮವೆಂಬುದಾಗಿ ದಾನಶಾಸನವನ್ನೇರ್ಪಡಿಸಿರುವರು. ಮಂಡಯಂ ವಿದ್ಯಾರ್ಥಿ ನಿಲಯಕ್ಕೂ, ಸಮುದಾಯದ ಕೆಲವು ಬಡವರಿಗೂ ೬,೦೦೦ ರೂಪಾಯಿಗಳ ಮೂಲಧನದ ವೃದ್ಧ್ಯಂಶದಿಂದ ಸಹಾಯ ಮಾಡಿರುವರು.

೧೫. ಈ ಗ್ರಂಥವನ್ನು ಬರೆದಿರುವ ಮಂಡಯಂ ಜಟಾವಲ್ಲಭ ತಿಂಗ್ರೈಯ್ಯಂಗಾರ್ಯರಿಂದ, ತನ್ನ ತಾಯಿಯವರ ಆಜ್ಞೆಯಂತೆ, ಈಗ ಸುಮಾರು ೩೫ ವರ್ಷಗಳಿಂದಲೂ ಮಂಡಯದಲ್ಲಿ ಶ್ರೀ ಲಕ್ಷ್ಮೀಜನಾರ್ದನಸ್ವಾಮಿಯವರ ರಥೋತ್ಸವದ ದಿವಸ ದೇವಸ್ಥಾನದಲ್ಲಿ ಶ್ರೀ ವೈಷ್ಣವ ಮಹಾಜನಗಳಿಗೆ ತದೀ

ಯಾರಾಧನೆಯನ್ನು ನಡೆಸಲ್ಪಡುತ್ತಿದೆ. ಸ್ವಲ್ಪ ಖರ್ಚಿನಿಂದ ಆರಂಭವಾಗಿ, ಈಗ ವರ್ಷಂ ಪ್ರತಿ ೩೦೦-೩೫೦ ರೂಪಾಯಿಗಳು ವಿನಿಯೋಗವಾಗುತ್ತಿದೆ. ಈ ಕೈಂಕರ್ಯವು ಸ್ಥಿರವಾಗಿ ನಡೆದುಕೊಂಡು ಬರುವುದಕ್ಕಾಗಿ ಮೂಲಧನವನ್ನು ಒದಗಿಸಲಾಗದೇ ಇರುವುದು ಬಹಳ ಕೊರತೆಯಾಗಿದೆ.

೧೬. ತಿರುನಾರಾಯಣಪುರದ ಶ್ರೀ ಯದುಗಿರಿ ಯತಿರಾಜಮಠದಲ್ಲಿ ಅನೇಕ ಕೈಂಕರ್ಯಗಳಿಗಾಗಿಯೂ, ಮಂಡಯ, ತಿರುಪಲ್ಲಿಕ್ಕೇಣಿ, ಬೆಂಗಳೂರು ಮಲ್ಲೇಶ್ವರ ದೇವಸ್ಥಾನಗಳಲ್ಲಿಯೂ ಹಲವು ಕೈಂಕರ್ಯಗಳಿಗಾಗಿಯೂ ನಮ್ಮವರು ಬಿಡುಬಿಡುವಾಗಿ ಮೂಲಧನವನ್ನು ಏರ್ಪಡಿಸಿದ್ದಾರೆ. ಈ ವಿವರಗಳು ಸಂಪೂರ್ಣವಾಗಿ ಸಕಾಲಕ್ಕೆ ಒದಗಲಿಲ್ಲ.

೧೭. ನಮ್ಮ ಸಮುದಾಯದಲ್ಲಿ ಶ್ರೀಮದಿತ್ಯಾದಿಗಳಾದ ಮದ್ರಾಸ್ ಪೋಸ್ಟ್ಮಾಸ್ಟರ್? ಶ್ರೀನಿವಾಸಯ್ಯಂಗಾರ್ ಸ್ವಾಮಿಗಳು (ಆರ್‌ಬತ್‌ನಾಟ್ ಬ್ಯಾಂಕ್ ಕ್ಯಾಷಿಯರ್); ದಿವಾನ್‌ಬಹದ್ದೂರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳು; ಮದ್ರಾಸ್ ಬ್ಯಾಂಕ್ ದಿವಾನ್‌ಬಹದ್ದೂರ್ ಎಂ. ಎ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳು; ಮದ್ರಾಸ್ ನ್ಯಾಷನಲ್ ಬ್ಯಾಂಕ್ ಕ್ಯಾಷಿಯರ್ ನಾಯಕ ಎಂಬೆರುಮಾನಾರ್ ಸ್ವಾಮಿಗಳು (ಎಂ. ಎನ್. ರಾಮಾನುಜಾರ್ಯರವರು); ಎಂ. ಎ. ಶ್ರೀನಿವಾಸಾಚಾರ್ ಸ್ವಾಮಿಗಳು (ಅಣ್ಣಾದೊರೆ ಶ್ರೀನಿವಾಸಾಚಾರ್ಯರು); ಎಂ. ಎ. ಕೃಷ್ಣಮಾಚಾರ್ ಸ್ವಾಮಿಗಳು (ಅಣ್ಣಾದೊರೆ ಕೃಷ್ಣಮಾಚಾರ್ಯರು), ಎಂ.ಸಿ. ಅಳಶಿಂಗ ಪೆರುಮಾಳ್ ಸ್ವಾಮಿಗಳು ಈ ಮಹನೀಯರು ನಮ್ಮ ಸಮುದಾಯದವರ ಮತ್ತು ಇತರ ಸಮುದಾಯದವರ ಅನೇಕರಿಗೆ ಜೀವನೋಪಾಯದ ಉದ್ಯೋಗಗಳನ್ನು ಕಲ್ಪಿಸಿಕೊಟ್ಟು ಸಂಸಾರಗಳನ್ನು ಸುಖವಾಗಿ ಸ್ಥಾಪನೆಮಾಡಿ ಕೀರ್ತಿಯನ್ನು ಗಳಿಸಿದ್ದಾರೆ.

೧೮. ಮೈಸೂರಿನಲ್ಲಿ ಶ್ರೀ|| ಉ|| ಗೋಮಠಂ ಶ್ರೀನಿವಾಸಜೋಸ್ಯರ್ ಸ್ವಾಮಿಗಳವರ (ಶ್ರೀ|| ಉ|| ಜಿ. ಆರ್. ಜೋಸ್ಯರ್ ಸ್ವಾಮಿಗಳ ತಂದೆ) ಅಂಕಿತದಲ್ಲಿ ಒಂದು ಶಿಶುವಿಹಾರವು ಏರ್ಪಟ್ಟು ವಿದ್ಯಾದಾನವಾಗುತ್ತಿದೆ.

ಐಯ್ಯಂಗಾರ್ ಸ್ವಾಮಿಗಳು, ಪ್ರೊಫೆಸರ್ ಮಳೂರು ರಂಗಾಚಾರ್ಯ ಸ್ವಾಮಿಗಳು, ಎಂ. ಎ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳು, ಎಂ. ಎ. ತಿರುನಾರಣಾಚಾರ್ಯ ಸ್ವಾಮಿಗಳು. ಈಗಲೂ ಡಾಕ್ಟರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳೂ, ಎಂ. ಎ. ಕೃಷ್ಣಮಾಚಾರ್ಯರೂ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾಗಿದ್ದಾರೆ. ದಿವಂಗತ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ಯರ ಹೆಸರಿನಲ್ಲಿ ಬಹುಮಾನ ಕೊಡುವುದಕ್ಕಾಗಿ 2 ನಿಧಿಗಳೂ, ದಿವಂಗತ ಎಂ. ಎ. ಪಾರ್ಥಸಾರಥಿ ಐಯ್ಯಂಗಾರ್ಯರ ಹೆಸರಿನಲ್ಲಿ ಒಂದು ನಿಧಿಯೂ ಇವೆ.

22. ಶ್ರೀ|| ಉ|| ಅಟರ್ನಿ ನಸಿಂಹಾಚಾರ್ಯ ಸ್ವಾಮಿಗಳು ಪೇಯಾಳ್ವಾರ್ ಕೋಯಿಲ್ ಬೀದಿಯಲ್ಲಿ ತಮ್ಮ ಮನೆಯ ಬಾಡಿಗೆಯಿಂದ ಬರತಕ್ಕ ವರಮಾನವನ್ನು ಶ್ರೀ ಪಾರ್ಥಸಾರಥಿಯ ಕಾಲಸಂಧಿಗಾಗಿ ಬಿಟ್ಟಿದ್ದಾರೆ. ಶ್ರೀ ಆಳಶಿಂಗರ ತೆಪ್ಪೋತ್ಸವವೂ ಈ ಹಣದಿಂದಲೇ ನಡೆಯುತ್ತಿದೆ.

23. ಶ್ರೀ|| ಉ|| ಆರ್. ನರಸಿಂಹಾಚಾರ್ಯರು 50 ವರ್ಷಗಳ ಹಿಂದೆ ಉಭಯ ವೇದಾಂತವರ್ಧಿನೀ ಸಭೆಯನ್ನು ಸ್ಥಾಪಿಸಿ, ಪ್ರತಿವರ್ಷವೂ ತಿರುನಾರಾಯಣಪುರದಲ್ಲಿ ರಾಮಾನುಜಾಚಾರ್ಯರ ತಿರುನಕ್ಷತ್ರ ಸಮಯದಲ್ಲಿ ಸಭೆ ಸೇರುವಂತೆ ಮಾಡಿದ್ದಾರೆ. ಉಭಯ ವೇದಾಂತ ಪ್ರವಚನಕ್ಕೆ ಉತ್ತೇಜಕವಾಗಿ ಪರೀಕ್ಷೆಗಳೂ ನಡೆಯುತ್ತವೆ ಈ ಸ್ವಾಮಿಗಳು ಇನ್ನೂ ಕೆಲವು ಧರ್ಮಕಾರ್ಯಗಳಿಗಾಗಿ ಸ್ವಂತ ಹಣದಿಂದ ನಿಧಿಯನ್ನು ಕೂಡ ಏರ್ಪಡಿಸಿದ್ದಾರೆ.

24. ಹಿಂದೆ ಮದ್ರಾಸ್ ಬ್ಯಾಂಕ್ ಕ್ಯಾಷಿಯರ್ ಆಗಿದ್ದ ಶ್ರೀ|| ಉ|| ಮನ್ನಿ ಶಿಂಗರಾಚಾರ್ಯ ಸ್ವಾಮಿಗಳು ಶ್ರೀಪೆರಂಬೂದೂರಿನಲ್ಲಿ ವೇದಮಹಾ ಪಾಠಶಾಲೆಯನ್ನು ಸ್ಥಾಪಿಸಿದ್ದು.

25. ಮೈಸೂರು ದೇಶದಲ್ಲಿ ವಿದ್ಯಾಧಿಕಾರಿಗಳಾಗಿದ್ದ ಶ್ರೀ|| ಉ||ಮುದಿಗುಂಬಂ ತಿರುಮಲಾಚಾರ್ಯ ಸ್ವಾಮಿಗಳು ಬೇಲೂರಿನಲ್ಲಿ ಶ್ರೀ ಚೆನ್ನಕೇಶವ ದೇವಸ್ಥಾನದ ಪಕ್ಕದಲ್ಲಿ ಶ್ರೀ ಯತಿರಾಜ ಮಠದ ಶಾಖೆಯನ್ನು ಸ್ಥಾಪಿಸಿ

ವೇದಾಧ್ಯಯನಾದಿ ಪಾಠಶಾಲೆಯನ್ನು ಏರ್ಪಾಡು ಮಾಡಿ, ಶ್ರೀ ಮಠಕ್ಕೆ ಛತ್ರ ಬರುವಂತೆ ಭೂಮಿಯನ್ನು ಕೊಡಿಸಿದರು.

೨೬. ತಿರುವಲ್ಲೀಕ್ಕೇಣಿಯ ಶ್ರೀ ಯತಿರಾಜಮಠದ ಕಟ್ಟಡ, ಪ್ರಧಾನ್ ತಿರುಮಲರಾಯರಿಂದ ನಿರ್ಮಿತವಾದ ತೇರಡಿ ಮಂಟಪ, ಮತ್ತು ಯೋಗಿ ಪಾರ್ಥಸಾರಥಿ ಐಯ್ಯಂಗಾರ್ಯರ ಧರ್ಮಪತ್ನಿ ಶಿಂಗಮ್ಮನವರಿಂದ ನಿರ್ಮಿತವಾದ ನಂಬಿಳ್ಳೈ ಸನ್ನಿಧಿ, ಈ ಪವಿತ್ರ ಕೆಲಸಗಳೆಲ್ಲವೂ ನಮ್ಮ ಮಂಡಯಂ ಸಮುದಾಯದ ಮಹನೀಯರಿಂದ ಸ್ಥಾಪಿತವಾದುವು.

ಇನ್ನೂ ಅನೇಕ ಧರ್ಮಗಳಿವೆ. ವಿಷಯಸಂಗ್ರಹವಾಗಬೇಕು.

## ಪ್ರಕರಣ ೮

## ಮಂಡಯಂ ಶ್ರೀ ವೈಷ್ಣವ ಮಹಾಜನರ ಗ್ರಂಥಕರ್ತೃತ್ವವು

ಸುಮಾರು ೭೦೦ ಮನೆಗಳಿರುವ ಕಡಿಮೆ ಸಂಖ್ಯೆಯ ಸಮುದಾಯದವರಾದರೂ, ನಮ್ಮ ಸಮುದಾಯದವರಲ್ಲಿ ವಿದ್ಯೆಯು ಬಹಳ ಹೆಚ್ಚಿನ ಅಂತಸ್ತಿನದು. ಗ್ರಂಥಕರ್ತರು ಬಹುಳವಾಗಿದ್ದಾರೆ. ಗ್ರಂಥಗಳನ್ನು ಬಹಳ ಹೇರಳವಾಗಿ ರಚಿಸಿಯೂ, ಪ್ರಕಾಶಪಡಿಸಿಯೂ ಇದ್ದಾರೆ. ಅಂಥ ಗ್ರಂಥಗಳ ಪಟ್ಟಿಯನ್ನು ಆದಷ್ಟುಮಟ್ಟಿಗೆ ಸಂಗ್ರಹಿಸಿ ಕೊಟ್ಟಿದೆ. ಕ್ರಿ. ಶ. ೧೯೫೦ನೆಯ ಡಿಸೆಂಬರ್ ತಿಂಗಳವರೆಗೆ ಪರಮಪದಿಸಿರುವ ಗ್ರಂಥಕರ್ತರ ಸಂಖ್ಯೆ ಸುಮಾರು ೪೭.

ಹೇಗಾದರೂ ಮಾಡಿ ನಮ್ಮವರು ರಚಿಸಿಯೂ ಪ್ರಕಾಶಪಡಿಸಿಯೂ ಇರುವ ಎಲ್ಲಾ ಗ್ರಂಥಗಳನ್ನೂ (ಸುಮಾರು ೫೦೦) ಒಂದೆಡೆಯಲ್ಲಿ ಕೂಡಿಸಿಡುವ ಭಾಗ್ಯ ಒದಗಬೇಕು. ಯಾವ ಮಹಾನುಭಾವರಾದರೂ ಈಗಲೇ ಯತ್ನಿಸಬೇಕೆಂದು ಸವಿನಯ ಪ್ರಾರ್ಥನೆ. ಮೈಸೂರಿನಲ್ಲಿ ನಮ್ಮ ವಿದ್ಯಾರ್ಥಿ ನಿಲಯದಲ್ಲಿ ಶೇಖರಿಸಬಹುದು.

# ಗ್ರಂಥಗಳ ಪಟ್ಟಿ

## ಪರಮಪದಿಸಿರುವ ಗ್ರಂಥಕರ್ತರು

೧. ಶ್ರೀ|| ಉ|| ತಿರುಮಲೈ ಗೋವಿಂದರಾಜ ಉಡೈಯರ್ ಸ್ವಾಮಿಗಳು (ಮಂಡಯದ ಪ್ರತಿಷ್ಠಾಪಕರು)

(೧) ಉಭಯ ವೇದಾನ್ತಾಚಾರ್ಯದಿನಚರಿ.

೨. ಶ್ರೀ|| ಉ|| ಅಪ್ಪಯಾಚಾರ್ಯ ಸ್ವಾಮಿಗಳು. (ರಾಮಾನುಜಪುರ ಪ್ರತಿಷ್ಠಾಪಕರು.)

(೧) 'ಅಷ್ಟಶ್ಲೋಕಿ'ಯ ಮೇಲೆ 'ಆರಾಯಿರಪ್ಪಡಿ' ವ್ಯಾಖ್ಯಾನ.

(೨), (೩), ಮತ್ತು ಎರಡು ಗ್ರಂಥಗಳು.

೩. ಶ್ರೀ|| ಉ|| ವೇದಾನ್ತಿ ರಾಮಾನುಜಜೀಯರ್ ಸ್ವಾಮಿಗಳು

(ತಿರುನಾರಾಯಣಪುರದಲ್ಲಿ ಶ್ರೀ ಯತಿರಾಜಮಠದ ಸ್ವಾಮಿಗಳು

(ಪ. ಕ್ರಿ. ಶ. ೧೫೫೦

'ಪ' ಎಂದರೆ ಪರಮಪದಿಸಿದ ಸುಮಾರುಕಾಲ.)

ನಿರ್ಹೇತುಕದೀಪಿಕಾ, ಕೈವಲ್ಯದೀಪಿಕಾ ದಿವ್ಯಸೂರಿಪ್ರಭಾವ ದೀಪಿಕಾ, ಅಷ್ಟಶ್ಲೋಕೀ ವ್ಯಾಖ್ಯಾನ.

ಇವುಗಳಲ್ಲಿ ಮೊದಲು ೩ ಪುಸ್ತಕಗಳು ದೊರೆತಿಲ್ಲ. ಅಷ್ಟಶ್ಲೋಕೀ ವ್ಯಾಖ್ಯಾನವನ್ನು ವಿದ್ವಾನ್ ಆಸೂರಿ ಅನಂದಾಳ್ವಾರ್ ಸ್ವಾಮಿಗಳು ಅಚ್ಚುಪಡಿಸಿ ಪ್ರಕಾಶಪಡಿಸಿದ್ದಾರೆ.

೪. ಪ್ರಧಾನ್ ತಿರುಮಲಾಚಾರ್ಯ (ಪ. ಕ್ರಿ. ಶ. ೧೬೨೫):

(೧) ಕರ್ಣವೃತ್ತಾಂತ ಕಥಾ.

೫. ಮಂತ್ರಿ ತಿರುಮಲಾರ್ಯ. (ಕ್ರಿ. ಶ. ೧೬೪೫–೧೭೦೯)

(ಮೈಸೂರುದೇಶದ ಮಂತ್ರಿ):

(೧) ಗೀತಗೋಪಾಲಂ (೨) ಚಿಕ್ಕದೇವರಾಯ ವಿಜಯಂ (೩) ಅಪ್ರತಿಮ ವೀರಚರಿತೆ (೪) ಚಿಕ್ಕದೇವರಾಜ ವಂಶಾವಳಿ ; ಇತ್ಯಾದಿ ಗ್ರಂಥಗಳು.

ಚಿಕ್ಕದೇವರಾಜರು ರಚಿಸಿರುವ ಚಿಕ್ಕದೇವರಾಜ ಬಿನ್ನಪವೆಂಬ ವಿಶಿಷ್ಟಾದ್ವೈತ ಸಾರಗ್ರಂಥವು ಈ ಮಂತ್ರಿಗಳ ಉಪದೇಶಬಲದಿಂದಲೇ ಆಗಿರಬಹುದು.

೬. ಶಿಂಗರಾರ್ಯ (ಮಂತ್ರಿ ತಿರುಮಲಾರ್ಯರ ಸಹೋದರರು):

(೧) ಮಿತ್ರವಿಂದಾ ಗೋವಿಂದನಾಟಕ (ಕನ್ನಡಭಾಷೆಯಲ್ಲಿ ಇದೇ ಮೊದಲನೆಯ ನಾಟಕ ಗ್ರಂಥ.)

(೨) ತಿರುಮಲಾರ್ಯರ ಸಂಸ್ಕೃತ ಗ್ರಂಥಗಳ ವ್ಯಾಖ್ಯಾನ.

೭. ಪ್ರಧಾನ ತಿರುಮಲರಾವ್ (ಪ. ಕ್ರಿ. ಶ. ೧೮೧೫)

(೧) ತಿರುಮಲಾರ್ಯ ವಿಜಯ.

೮. ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯರು (ಮದ್ರಾಸ್‌ಲ್ಲಿ ನೆಲೆಸಿದವರು) (ಪ.ಕ್ರಿ.ಶ. ೧೮೩೮):

(೧) ಹಳಗನ್ನಡ ನುಡಿಗನ್ನಡಿ (೨) ಹೊಸಗನ್ನಡ ನುಡಿಗನ್ನಡಿ (೩) ಶಬ್ದಮಂಜರಿ (೪) ಧಾತುಮಂಜರಿ.

೯. ಧಾಟಿ ಶಿಂಗಲಾಚಾರ್ಯ (ಪ.ಕ್ರಿ.ಶ. ೧೮೫೦):

(೧) ಕಥಾಸಂಗ್ರಹ.

೧೦. ಶ್ರೀ|| ಉ|| ವಿದ್ವಾನ್ ನಾಟಂಪಳ್ಳಿ ಅನಂದಾಳ್ವಾರ್ ಸ್ವಾಮಿಗಳು (ಕ್ರಿ.ಶ. ೧೮೨೩-೧೮೬೩):

(೧) ವೇದಾನ್ತ ವಾದಾವಳೀ.

ವೇದಾನ್ತ ವಾದಾವಳೀ ಗ್ರಂಥದಲ್ಲಿ ಉದಾಹೃತವಾದ ಮಹಾಗ್ರಂಥಗಳೇ ಸುಮಾರು ೧೪೦ಕ್ಕೆ ಮೇಲೆ ಇವೆ. ಎಂದರೆ ಈ ಗ್ರಂಥದ ಮಹತ್ವವು ತಿಳಿಯುತ್ತದೆ.

(೨) ನ್ಯಾಯಭಾಸ್ಕರ.

ಇದು ಅದ್ವೈತಮತಕ್ಕೆ ಮೂಲಸ್ತಂಭವಾದ ಅದ್ವೈತಸಿದ್ಧಿ, ಬ್ರಹ್ಮಾನಂದೀಯ, ಲಘುಚಂದ್ರಿಕಾ ಗ್ರಂಥಗಳ ಖಂಡನ.

(೩) ಶತಕೋಟಿ ಖಂಡನ (ಪ್ರಬಂಧ.)

(೪) ಣತ್ವತತ್ವ ವಿಭೂಷಣವೆಂಬ ನವಕೋಟಿ ಖಂಡನ.

೧೯. ವದ್ರಾಸಿನಲ್ಲಿ ಶ್ರೀಮದಿತ್ಯಾದಿ ಮಳಹಾಳ್ವಾರ್ ನರಸಿಂಹಾಚಾರ್ಯ ಸ್ವಾಮಿಗಳವರು ಪ್ರಬಂಧ ಸ್ತೋತ್ರ ಪಾಠಶಾಲೆಯನ್ನು ನಡೆಸಿಕೊಂಡು ಬಂದು ನಮ ಬಾಲಕರಲ್ಲಿ ವೈದಿಕವೃತ್ತಿಯನ್ನು ಕಲ್ಪಿಸಿ ಕೀರ್ತಿಯನ್ನು ಗಳಿಸಿದರು.

೨೦. ಮದ್ರಾಸಿನಲ್ಲಿ ಶ್ರೀಮದಿತ್ಯಾದಿ ಆಳಸಿಂಗಪೆರುಮಾಳ್ ರವರ ಮಹತ್ತರವಾದ ಪ್ರಯತ್ನದಿಂದಲೇ ಸ್ವಾಮಿ ವಿವೇಕಾನಂದರು ಅಮೆರಿಕಾದೇಶಕ್ಕೆ ಹೋಗಿ ನಮ್ಮ ಹಿಂದೂಮತಧರ್ಮ ಪ್ರಚಾರವನ್ನು ಮಾಡಿದುದು. "ಬ್ರಹ್ಮವಾದಿನ್'' ಎಂಬ ಮಾಸ ಪತ್ರಿಕೆಯನ್ನು ನಡೆಯಿಸಿದರು. ಈಗಲೂ ಶ್ರೀ ರಾಮಕೃಷ್ಣಾಶ್ರಮದ ಪ್ರಮುಖ ಗ್ರಂಥಗಳಲ್ಲೆಲ್ಲಾ ಶ್ರೀ ಆಳಸಿಂಗಪೆರುಮಾಳ್ ರವರಿಗೆ 'ನನ್ನ 'ಶ್ರೀ ಆಳಸಿಂಗ' ಎಂಬ ಸ್ವಾಮಿ ವಿವೇಕಾನಂದರು ಪ್ರೀತಿ ಮತ್ತು ಕೃತಜ್ಞತಾಪುರಸ್ಕರವಾದ ನಾಮಧೇಯವು ಸಾಗಿಬರುತ್ತಿದೆ. ಶ್ರೀ ಆಳಸಿಂಗಪೆರುಮಾಳರ ದೂರದರ್ಶಿತ್ವವೂ, ಕಾರ್ಯನಿರ್ವಾಹಕಶಕ್ತಿಯೂ ಭಾರತಖಂಡದಲ್ಲೇ ಹೊಗಳಲ್ಪಡುತ್ತಿದೆ.

೨೧. ದೇವಸ್ಥಾನ, ಮಠಗಳ ಉತ್ಸವಾದಿ ವೈಧಿಕ ಧರ್ಮಕಾರ್ಯಗಳಲ್ಲೇ ನಿರತರಾಗದೆ, ಲೌಕಿಕದೃಷ್ಟಿಯನ್ನೂ ಇಟ್ಟುಕೊಂಡು ಆಧುನಿಕ ಪ್ರಗತಿ ಮಾರ್ಗವನ್ನನುಸರಿಸಿ, ಅನೇಕ ಜನರು ಪಂಡಿತೋತ್ತಮರುಗಳಾಗಿ, ಧನವಂತರಾಗಿ, ಕೀರ್ತಿವಂತರಾಗಿ ಬಾಳಿಬದುಕುವುದಕ್ಕೆ ನಮ್ಮ ಮಹಾಜನರು ಮುಖ್ಯಕಾರಣಕರ್ತರೆನ್ನುವುದನ್ನು ತಿರುವಲ್ಲಿಕ್ಕೇಣಿಯ ಹಿಂದೂ ಹೈಸ್ಕೂಲ್ ಎನ್ನುವ ವಿದ್ಯಾಶಾಲೆಯ ಇತಿಹಾಸದಲ್ಲಿ ನೋಡಬಹುದು. ಸಂಕುಚಿತಮನೋಭಾವವಿಲ್ಲದೆ ಸಾರ್ವಜನಿಕರ ಹಿತವನ್ನು ಕೋರಿ ಮಾಡಿದ ಮಹಾಕಾರ್ಯವಿದು.

ಈ ಶಾಲೆಯು ಒಂದು ಶತಮಾನದ ಹಿಂದೆ, ಎಂದರೆ ೧೮೫೨ ನೆಯ ಇಸವಿಯಲ್ಲಿ ತಮಿಳು ಮತ್ತು ತೆಲುಗುಭಾಷೆಯ ಎರಡು ಚಿಕ್ಕ ಶಾಲೆಗಳಾಗಿದ್ದು ಕೆಲವು ಕಾಲಾನಂತರ ಒಂದಾಯಿತು. ೧೮೯೭ ನೇ ಇಸವಿಯಲ್ಲಿ ಈ ಶಾಲೆಯು ಅವನತಸ್ಥಿತಿಗೆ ಬಂದಾಗ ಮದ್ರಾಸ್ ಬ್ಯಾಂಕ್ ಹೆಡ್ ಕ್ಯಾಷಿಯರ್ ಅಧಿಕಾರದಲ್ಲಿದ್ದ ಎಂ. ಎ. ಸಿಂಗರಾಚಾರ್ಯರು ಕಾರ್ಯನಿರ್ವಾಹಕ ಮಂಡಲಿಯ

ಪ್ರಾರ್ಥನೆಯನ್ನು ಅಂಗೀಕರಿಸಿ ಕಾರ್ಯದರ್ಶಿಗಳಾದರು. ಆಗ ಬಾಲಕರ ಪಾಠ ಶಾಲೆಯಲ್ಲಿ ೪೮ ಹುಡುಗರುಮಾತ್ರ ಇದ್ದರು. ಆರ್ಥಿಕ ಸ್ಥಿತಿಯಲ್ಲಾದರೋ ೮೦ ರೂಪಾಯಿಗಳನ್ನು ಕೈಯಿಂದ ಹಾಕಬೇಕಾಗಿತ್ತು. ಉಪಾಧ್ಯಾಯರ ಸಂಬಳಕೂಡ ಬಾಕಿ ಇದ್ದಿತು. ಶ್ರೀಮಾನ್ ಶಿಂಗರಾಚಾರ್ಯರು ತಮ್ಮ ಸ್ವಂತ ಹಣದಿಂದ ಎಲ್ಲಾ ಬಾಕಿಗಳನ್ನೂ ತೀರಿಸಿ, ಶಾಲೆಯ ಹಣವು ಇಲ್ಲದಿದ್ದರೂ ಕಾಲಾಕಾಲದಲ್ಲಿ ಸಂಬಳವನ್ನು ಬಟವಾಡೆಮಾಡಿ ಹಣಬಂದಮೇಲೆ ಹಿಂತಿರುಗಿ ತೆಗೆದುಕೊಳ್ಳುತ್ತಿದ್ದರು. ಕಾಲಕ್ರಮೇಣ ಮೆಟ್ರಿಕ್ಯುಲೇಷನ್ ತರಗತಿಯನ್ನು ತೆರೆಯಲಾಯಿತು. ಈಗ ಈ ಶಾಲೆಯು ದಕ್ಷಿಣದೇಶದಲ್ಲೆಲ್ಲಾ ಅತಿ ಮುಖ್ಯವಾದ ದೊಡ್ಡ ಶಾಲೆಯಾಗಿ ಪ್ರಖ್ಯಾತವಾಗಿದೆ.

ಈ ಮಹಾಶಯರ ಸ್ವಾರ್ಥತ್ಯಾಗವೂ, ಶ್ರದ್ಧೆಯೂ ಶಾಲೆಯ ಭದ್ರತೆಗೂ, ಅಭಿವೃದ್ಧಿಗೂ ಕಾರಣವೆಂದರೆ ಅತಿಶಯವಲ್ಲ. 1869ರಿಂದ 1905ರಲ್ಲಿ ಅವರು ದಿವಂಗತರಾಗುವವರೆಗೂ ಅಂದರೆ ಸುಮಾರು 38 ವರ್ಷಗಳ ಕಾಲ ಕಾರ್ಯದರ್ಶಿಗಳಾಗಿಯೂ, ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ ಮಹಾನುಭಾವರು. ಶ್ರೀ ಶಿಂಗರಾಚಾರ್ಯರ ಕೃತಜ್ಞತಾ ಸೂಚಕವಾಗಿ ಸಭಾಂಗಣವು ಅವರ ನಾಮಧೇಯದಿಂದ ಬೆಳಗುತ್ತಿದೆ. ಶಾಲೆಯ ಶತಮಾನೋತ್ಸವದ ವರದಿಯಲ್ಲಿ ಹೇಳಿರುವಂತೆ, "ಯಾವ ಪ್ರಾಪಂಚಿಕ ಸ್ಮಾರಕದಿಂದಲಾಗಲೀ ಸಾರ್ವಜನಿಕರು ಈ ಮಹಾಶಯರ ಸೇವೆಯ ಸಾಲವನ್ನು ಸರಿಯಾಗಿ ತೀರಿಸಲಾರರು. ವಿದ್ಯಾಭಿಮಾನಿಗಳಿಗೆ ಮಾರ್ಗದರ್ಶಕರಾಗಿ ಅವರು ಮಾಡಿದ ಸೇವೆಗೆ ಅವರ ಶಾಲೆಯೇ ತಕ್ಕ ಸ್ಮಾರಕ. ಆಡಂಬರ ರಹಿತವಾಗಿ ಸದಾ ಕಾಲದಲ್ಲೂ ಇಂತಹ ಸ್ಮಾರಕವು ಕಣ್ಣುಮುಂದೆ ನಿಲ್ಲುತ್ತದೆ." ಈ ಶಾಲೆಗೆ ಶಿಂಗರಾಚಾರ್ಯರ ಶಾಲೆ ಎನ್ನುವ ಹೆಸರು ರೂಢಿಯಲ್ಲಿತ್ತು.

ಈ ಮಹಾಶಯರು ಶಾಲೆಯ ವಿದ್ಯಾರ್ಥಿಗೆ ಬಹುಮಾನ ಕೊಡುವುದಕ್ಕಾಗಿ 2,400 ರೂಪಾಯಿಗಳ ಮೂಲಧನವನ್ನು ಸರ್ಕಾರದಲ್ಲಿಟ್ಟಿದ್ದಾರೆ.

ಈ ಕೆಳಗೆ ಕಂಡ ಮಹಾಶಯರುಗಳು ಈ ಶಾಲೆಯ ಅಭಿವೃದ್ಧಿಗಾಗಿ ಸೇವೆ ಸಲ್ಲಿಸಿರುವರು. ಶ್ರೀಮದಿತ್ಯಾದಿಗಳಾದ ಎಂ. ಓ. ಪಾರ್ಥಸಾರಥಿ

**ಅಮುದ್ರಿತವಾದ ಗ್ರಂಥಗಳು:—**

(೫) ರಸಮುರಳೀಧರ (೧೦) ಜಾತಿವಾದ
(೬) ಕುವಲಯಾನಂದ ಮಕರಂದ (೧೧) ಭೇದಸಮರ್ಥನ
(೭) ನ್ಯಾಯಶಾಸ್ತ್ರ ಕ್ರೋಡಪತ್ರಗಳು (೧೨) ಸತ್ಯತ್ವಾನುಮಾನ ನಿರೂಪಣ
(೮) ಅಪಹತ ಪಾಪ್ಮತ್ವ ನಿರ್ವಚನ (೧೩) ಭಾನರೂಪ ಜ್ಞಾನಖಂಡನ
(೯) ಆನಂದಮಯಾಧಿಕರಣ ವಿಚಾರ (೧೪) ಆಚಾರಲೋಚನ.

ಇತ್ಯಾದಿ.

೧೧. ದೇವಶಿಖಾಮಣಿ ಶ್ರೀನಿವಾಸೈಯ್ಯಂಗಾರು (ಪ.ಕ್ರಿ.ಶ. ೧೯೩೩):

(೧) ಪ್ರಬೋಧಚಂದ್ರೋದಯ (೨) ಕಿರಾತಾರ್ಜುನೀಯ ಕಥೆ (೩) ಕನ್ನಡಸಾಂಗತ್ಯ (೪) ಮುಕುಂದಮಾಲೆ (೫) ಗಿರಿಜಾಕಲ್ಯಾಣ ಕಥೆ (೬) ಧ್ರುವೋಪಾಖ್ಯಾನ (೭) ನಳಚರಿತ್ರೆ (೮) ಪ್ರಹ್ಲಾದಚರಿತ್ರೆ (೯) ವನ ಮಾಲೀವಿಲಾಸ ಕಥೆ.

೧೨. ಶ್ರೀ|| ಉ|| ಪೆರಿಯಸ್ವಾಮಿ ತಿರುಮಲಾಚಾರ್ಯರು (ಪ. ಕ್ರಿ. ಶ. ೧೮೯೯):

(೧) ಕರ್ಣಾಟಕ ಗೀತಗೋವಿಂದ (೨) ಉಪಾಯ ನಿಶ್ರೇಣಿಕಾ (೩) ವಿಗ್ರಹಾರಾಧನ ವಿಧಾಯಿನೀ (೪) ಗರಳಪುರೀ ಶಾಸ್ತ್ರಿಗಳ ಯುದ್ಧಕಾಂಡದ ವ್ಯಾಖ್ಯಾನ (೫) ಉತ್ತರಚಂಪುವಿಗೆ ವ್ಯಾಖ್ಯಾನ (೬) ಸಂಸ್ಕೃತ ಪ್ರಥಮ ಪುಸ್ತಕ (೭) ಬಾಲಬೋಧಿನೀ (೮) ಪ್ರೌಢಬೋಧಿನೀ (೯) ವೃದ್ಧಸೇವಿನೀ ಇತ್ಯಾದಿ.

೧೩. ನಾಟಕದ ರಂಗಾಚಾರ್ಯರು.

(೧) ರಿಂದ (೫) ನಾಟಕಗಳು.

೧೪. ಜಟಾವಲ್ಲಭ ತಿರುಮಲೈಯ್ಯಂಗಾರ್ಯರು (ಪ.ಕ್ರಿ.ಶ. ೧೨೮೫):

(೧) ಸಂಸ್ಕೃತ ಪ್ರಥಮ ಪುಸ್ತಕ (೨) ಸುಲಭ ವೈದ್ಯಚಿಕಿತ್ಸೆ (೩) ಅವತಾರ ವೈಭವ ಮತ್ತು ಸುಮಾರು ೪೦ ಓಲೆಯಲ್ಲಿ ಬರೆದಿರುವ ಗ್ರಂಥಗಳು.

೧೫. ಎಸ್. ಜಿ. ನರಸಿಂಹಾಚಾರ್ಯರು (ಪ. ೧೯೦೭):

ಇವರು ಆರ್ಯಮತ ಸಂಜೀವಿನೀ, ಕರ್ಣಾಟಕ ಕಾವ್ಯಮಂಜರಿ, ಕಾವ್ಯ ಕಲಾನಿಧಿ ಎನ್ನುವ ಮಾಸಪತ್ರಿಗಳನ್ನು ಆಜಿ ರಾಮಾನುಜಯ್ಯಂಗಾರ್ಯರ ಸಹಿತ ಅಚ್ಚುಹಾಕಿಸಿ ಕೀರ್ತಿಗಳಿಸಿದ್ದಾರೆ.

(೧) ಅಜನೃಪಚರಿತೆ (ಪದ್ಯ) (೨) ದಿಲೀಪಚರಿತೆ (ಪದ್ಯ) (೩) ಪ್ರೋಷಿತ ಪ್ರಿಯಸಮಾಗಮ (ಪದ್ಯ) (೪) ಅಲ್ಲಾವುದೀನ್ ಅದ್ಭುತ ದೀಪ (ಗದ್ಯ) (೫) ಈಸೋಪನ ನೀತಿಕಥೆಗಳು (ಗದ್ಯ) (೬) ಗಲಿವರನ ದೇಶಸಂಚಾರ (ಗದ್ಯ) (೭) ಭಾರತ ವೀರಚರಿತೆ (ಗದ್ಯ) (೮) ಗೃಯಾಲಿಯನ್ನು ಸಾಧುಮಾಡುವಿಕೆ (ನಾಟಕ), (೯) ರಿಂದ (೧೨ ಕನ್ನಡ ಪಠ್ಯಪುಸ್ತಕಗಳು (೧೩) ಹಿಂದೂದೇಶದ ಚರಿತ್ರ ಸಂಗ್ರಹ, (೧೪) ಕರ್ಣಾಟಕ ಕವಿಚರಿತೆ (೧೫) ಆರ್. ನರಸಿಂಹಾಚಾರ್ಯರ ಸಂಗಡ. (ಭಾಗ ೧) (೧೬) ಭೂವಿವರಣೆ, (೧೭) ಪದ್ಯಸಾರ, (೧೮) ಉತ್ತರರಾಮ ಚರಿತ್ರೆ (ನಾಟಕ) ಆದಿಪರ್ವ, ಸಭಾ ಪರ್ವ (ಸಹಸಂಪಾದಕ)

೧೬. ಎಂ. ಬಿ. ಶ್ರೀನಿವಾಸೈಯ್ಯಂಗಾರ್ಯರು.

(೧) ಜಯಸಿಂಹರಾಜ ಚರಿತೆ (೨) ಹೇಮರಾಜವಿಲಾಸ (೩) ನೀತಿ ಚಿಂತಾಮಣಿ (ಎಂ. ಎಸ್. ಪುಟ್ಟಣ್ಣನವರ ಸಂಗಡ) (೪) ವಾಗ್ವಿದಾಯಿನೀ (೫) ಹಿಂದೂಚರಿತ್ರ ಸಂಗ್ರಹ (ಎಂ ಎಸ್. ಪುಟ್ಟಣ್ಣನವರ ಸಂಗಡ) (೬) ಹಿಂದೂದೇಶದ ನಾಗರಿಕ (೩ ಭಾಗಗಳು) (೭) Aryan Prayer Book (೮) ನಿತ್ಯಾನುಸಂಧಾನ ಟೀಕೆ ೫

(a) ತಿರುಪ್ಪಲ್ಲಾಂಡು (d) ಅಮಲನಾದಿಪಿರಾನ್
(b) ತಿರುಪ್ಪಳ್ಳಿಯೆಳುಚ್ಚಿ (e) ಕಣ್ಣಿನುಣ್ ಶಿರುತ್ತಾಂಬು
(c) ತಿರುಪ್ಪಾವೈ

(೯) ಏಷ್ಯಾಖಂಡದ ಭೂವಿವರಣೆ (೧೦) ಅಧಿಕಾರಸಂಗ್ರಹಂ ಇತ್ಯಾದಿ.

೧೭ ಪ್ರೊಫೆಸರ್ ಗೋಳೂರು ರಂಗಾಚಾರ್ಯರು (ಕ್ರಿ.ಶ. ೧೧೬೧-೧೯೧೬)

(1 Rupavatara of Dharmakirti. 2 vols (Ed)

( ) Sri Bhashya of Ramanuja
(Translated along with Sri M.B.Varadaraja Iyengar)

(3) Hindu philosophy of Conduct
(Lectures on the Gita—3 vols.)

(4) Ganithasarasangraha of Mahaviracharya (Translated & Ed.)

(5) Meghaduta (A critical appreciation)

(6) Function of Religion in Social Evolution.

(7) The Yugas.

(8) Personal Equation in History

(9) Social Ideals of the Hindus

(10) Kavyadarsa of Dandin (Ed.)

(11) Prayogasangraha of Vararuchi (Ed.)

(12) Sri Ramanuja & Vaishnavism.

A lecture at Bangalore published in the *Brahmavadin* and later by Messrs. G. A. Natesan & Co. in 'Three Great Acharyas'

(13) Orthography & pronunciation in Tamil. (Published both in Tamil & English)

(14) Basu's Civil Marriage Bill

(15) Indian Loyalty

(16) Padyavali (A Sanskrit poem on Buddha's life-edited with Sri. S. Kuppuswami Sastrigal)

(17) Sanskrit presidential address to the Pandit's Parishad of Conjeevaram.

(18) Bharathi-Suprabhatam

(19) Social Reform on National Lines.

(20) Sarva-Darshana-Siddhantha-Sangraha of Sankaracharya (Translated & Ed.)

And variouus articles in the Brahmavadin, Indian Review, Educational Review etc. etc.

೧೮. ಡಾಕ್ಟರ್ ಎಂ. ಡಿ. ಶ್ರೀನಿವಾಸೈಯ್ಯಂಗಾರ್ಯರು.

(1) ಗರ್ಭಿಣೀ ಶಿಶುಸಂರಕ್ಷಣ (ಕ್ರಿ.ಶ. ೧೯೧೬) (೨) ವಿಷೂಚಿ.

೧೯. ಎಂ. ಎ. ಶ್ರೀನಿವಾಸಾಚಾರ್ಯರು. (ಆನಂದಾಂಪಿಳ್ಳೆ ಸ್ವಾಮಿಗಳು)

(1) ರಾಜಾಮಲಯಸಿಂಹ(2 ಭಾಗಗಳು) (3) ಲೆಖ್ಖಶಾಸ್ತ್ರದ ಕೈಪಿಡಿ.

೩) ಆಳವಂದಾರ್ ಸ್ತೋತ್ರ ಅರ್ಥಸಮೇತ (to be published)

೩೦ ಜಿ. ಜಿ ನರಸಿಂಹಾಚಾರ್ಯರು

(1) ರಾಮಾನುಜ ಗೀತಾಭಾಷ್ಯ
(in Brahmavadin—English Translation)

(2) Articles in Brahmavadin

(3) Agamic Rituals (Govt.)

(4) ಪ್ರಪತ್ತಿಯೋಗ (not publisehd)

(5) ವೈದ್ಯಸಂಗ್ರಹ (ಕೈ ಬರಹ)

೩೧ ವಾಸು ಶ್ರೀನಿವಾಸಯ್ಯಂಗಾರ್ಯರು

(1) An open letter to Mrs. A. Beasant

(2) ರಿಂದ (4) Moral Readers

(5) Valmiki & Shelley & several articles
(Indian Review, 1902)

(6) Parallel Quotations (in ಅಕಾರಾದಿ)
from Ramayana, Mahabharatha etc.

೩೨ ಎಂ. ಡಿ. ನಾರಣೈಯ್ಯಂಗಾರ್ಯರು (ಪ. ಕ್ರಿ. ಶ. ೧೯೩೮)

(1) ಹಿಂದೂ ವ್ಯವಹಾರ ಧರ್ಮಶಾಸ್ತ್ರ

೩೩ ಅಣ್ಣಾ ಧೊರೆ ನರಸಿಂಹಾಚಾರ್ಯರು (ಪ. ಕ್ರಿ. ಶ. ೧೯೧೩)

(1) ಯಜು ಸಂಧ್ಯಾಭಾಷ್ಯ ವಿವರಣಂ

(2) ಸ್ತೋತ್ರರತ್ನ-ಅರ್ಥಸಮೇ (not published)

೩೪ ಅಣ್ಣಾ ಧೊರೆ ತಿರುಮಲಾಚಾರ್ಯರು (ಪ. ಕ್ರಿ. ಶ. ೧೯೧೯)

(1) ನಾರದಭಕ್ತಿ ಸೂತ್ರ (೨) ಸರ್ವಮತ ಸಮನ್ವಯ

೩೫ ಅಣ್ಣಾ ಧೊರೆ ಶ್ರೀನಿವಾಸಾಚಾರ್ಯರು

(I) Mysore Pradhans (joint)

(2 Articles in "Mysore Review"

(3) Preface to ಚಿಕ್ಕದೇವರಾಜ ವಂಶಾವಳಿ

(4) Restoration of Mysore Dynasty (Manuscript)

೩೬ ಎಂ. ಎ. ಅನಂದಾಳ್ವಾರ್ಯರು (ಇಂಜಿನಿಯರ್)

(1) ರಿಂದ (3) Indian Architecture

(4) A forgotten chapter of Indian Engineering
(5) ಮುಕುಂದಮಾಲೆ ಇತ್ಯಾದಿ

೨೭ ಎಂ. ಡಿ. ಶ್ರೀನಿವಾಸಯ್ಯಂಗಾರ್ಯರು (ಧಾಟಿ):
(1) ಭೀಮ (2) ಮಹಿಷಾಸುರಮರ್ಧಿನಿ (3) ಸಾಧುಮಾರ (4) ಚಂದ್ರಗುಪ್ತ

೨೮ ಪಂಡಿತರತ್ನ, ವಿದ್ಯಾನಿಧಿ ಜಯರಾಮ ವೆಂಕಟಾಚಾರ್ಯರು:
(1) ವಿಶಿಷ್ಟಾದ್ವೈತ ದೀಪಿಕೆ (2) ಭರತಖಂಡದ ಪ್ರಾಚೀನ ಕಲೆಗಳು (joint) (3) ಆಚಾರ ಇತ್ಯಾದಿ.

೨೯ ಶ್ರೀಯೋಗಿ ಪಾರ್ಥಸಾರಥಿ ಅಯ್ಯಂಗಾರ್ ಸ್ವಾಮಿಗಳು
(1) ಶ್ರೀ ಭಗವದ್ವಿಷಯಂ (2) ಶ್ರೀ ಸಹಸ್ರನಾಮಭಾಷ್ಯಂ (3) ಶ್ರೀ ವಿಷ್ಣುಧರ್ಮಂ (4) ಈಶ್ವರ ಸಂಹಿತೈ (5) ಚಂಡಕೌಶಿಕ ನಾಟಕಂ (6) ಉಡೈಯವರ್ ನಿಯಮನಪ್ಪಡಿ (7) ಶ್ರೀವಿಷ್ಣುಸಹಸ್ರನಾಮ ಮೂಲಂ (8) ಶಾಣ್ಡಿಲ್ಯಸ್ಮೃತಿ (9) ಶ್ರೀ ಪಾರ್ಥಸಾರಥಿ ಬ್ರಹ್ಮ ಉತ್ಸವಂ (10) ಶ್ರೀ ನರಸಿಂಹ ಬ್ರಹ್ಮ ಉತ್ಸವಂ (11) Sri Bhagavad Gita (English) (12) Sri Mukundamala (English verse) (13) Sri Vachana Bhushanam (English) (14) ಆಗಮ ಪ್ರಾಮಾಣ್ಯಂ (15) ಕರಾವಲಂಬಸ್ತೋತ್ರಂ (16) ಸಿದ್ಧಿತ್ರಯಂ (17) ಶ್ರೀ ಭಾಷ್ಯ ಪ್ರಮೇಯ ಮೂಲ (18) ವೇದಾಂತ ಕಾರಿಕಾವಳೀ (19) ಹರಿಮಹಾತ್ಮ ದರ್ಪಣಂ (20) ಭರದ್ವಾಜ ಸಂಹಿತೈ (21) ಶ್ರೀ ವರಾಹ ಚರಮ ಶ್ಲೋಕಂ (22) ಶ್ರೀ ವಚನಭೂಷಣಂ (23) ವೇದಾಂತ ದೀಪಸಾರಂ (24) ವೇದಾಂತ ಸಂಗ್ರಹಂ (25) ವೆಂಕಟಾಚಲ ಮಹಾತ್ಮ್ಯಂ (26) ಯತಿರಾಜ ವಿಂಶತಿ (27) ಅಥರ್ವ ಶಿಖಾವಿಲಾಸಂ (28) ಪ್ರಸನ್ನ ಪಾರಿಜಾತಂ (29) ವಾಕ್ಯಗುರು ಪರಂಪರೈ (30) ಸುಭಾಲೋಪನಿಷತ್ (31) ತತ್ವತ್ರಯಂ (English translation) (32) ಜಿತನ್ತೇ, ಶರಣಾಗತಿ ಗದ್ಯಂ (33) ಕನ್ನಡ ಮುಮುಕ್ಷುಪ್ಪಡಿ (34) ಉನ್ಮತ್ತ ರಾಘವಂ ಇತ್ಯಾದಿ, ಇತ್ಯಾದಿ.

ಇವುಗಳಲ್ಲಿ 9ರಿಂದ 13 ಗ್ರಂಥಗಳೂ 31 & 33ನೇ ಗ್ರಂಥವೂ ಇವರು ಬರೆದುವು. ಮಿಕ್ಕವು ಇವರಿಂದ ಪರಿಶೋಧಿಸಲ್ಪಟ್ಟು ಅಚ್ಚಾದವು.

೩೦ ಶ್ರೀ॥ ಉ॥ ಶ್ರೀ ಕಲ್ಕೀ ಸ್ವಾಮಿಗಳು (ಎಂ. ಟಿ. ನರಸಿಂಹಾಚಾರ್ಯರು

(1) ವೇದಾಂತ ಪಾದಾವಳೀ
(2) ವರವರಮುನಿದಿನಚರ್ಯಾ
(೩) ಪರಿವೃತ್ತಿ ರತ್ನಮಾಲಾ
(4) ಗೀತಾರ್ಥ ಸಾರಾಮೃತ (ಸಂಸ್ಕೃತ)
(೬) ಶ್ರೀಕೃಷ್ಣ ಗೋಪೀ ಸಂವಾದ
(6) ಅನಂತಾರ್ಯ ವೈಭವಂ (ಸಂಸ್ಕೃತ)
(7) ಸಹಸ್ರ ಗಾಥಾರತ್ನಾವಳೀ
(8) ಶ್ರೀ ಭಗವನ್ಮತ
(9) ಶ್ರೀಭಾಷ್ಯ ಸಾರಾಮೃತ
(10) ಗೀತಾಮೃತ ತರಂಗಿಣೀ
(11) ಗೀತಾಸಾರಾಮೃತ (ಕನ್ನಡ)
(12) ತಿರುವಾಯ್ಮೊಳಿ (ಸಂಸ್ಕೃತಕ್ಕೆ ಪರಿವರ್ತನೆ)
(13) ಲಘು ನಿತ್ಯಾನುಸಂಧಾನ
(14) ಬೃಹನ್ನಿತ್ಯಾನುಸಂಧಾನ (manuscript)
(15) ಮಹಾತ್ಮ ಚರಿತಾವಳಿ
(16) ಸಂಪ್ರದಾಯ ಸಾರಾವಳಿ ✓✓
(17) ಮಂಡಯಂ ಶ್ರೀವೈಷ್ಣವ ಸಮಯಾಚಾರಂಗಳ್ ✓
(18) ಗೋತ್ರಪ್ರವರ ನಿಬಂಧನಸಾರಂ
(19) ಆಶೌಚಾದಿ ನಿರ್ಣಯಃ
(20) ನಾಲಾಯಿರ ಪ್ರಬಂಧ (ಸಂಸ್ಕೃತ ಪರಿವರ್ತನ) ಇತ್ಯಾದಿ.

(ಈ ಮಹಾತ್ಮರು ಬರೆದಿಟ್ಟಿರುವ ಗ್ರಂಥಭಂಡಾರವು ಮಹತ್ತರವಾಗಿದೆ)

೩೨ ಮಹಾಮಹೋಪಾಧ್ಯಾಯ, ರಾವ್ ಬಹದ್ದೂರ್, ಪ್ರಾಕ್ತನ ವಿಮರ್ಶ ವಿಚಕ್ಷಣ, ಪ್ರಾಚ್ಯವಿದ್ಯಾವೈಭವ ಆರ್. ನರಸಿಂಹಾಚಾರ್ಯರು.

(1) ನಗೆಗಡಲು, (2) ರಿಂದ (4) ಕರ್ಣಾಟಕ ಕವಿಚರಿತೆ (5) ನೀತಿ ವಾಕ್ಯಮಂಜರಿ (6) ರಿಂದ 8 Mysore Archaeological Reports

(Govt. 1906-1924) (19)ನೀತಿಮಂಜರಿ (20) Monograph on Belur & Helebid(Govt.)

(21) Monograph on Hosahalli (Govt.) (22) Monograph on ಸೋಮನಾಥಪುರ (Govt.) (23) Articles on ಶೃಂಗೇರಿ (24) Madhva & Sayana (25) Research articles in various peripodicals ಇತ್ಯಾದಿ

೩೩ ಆಜಿ ರಾಮಾನುಜೈಯ್ಯಂಗಾರ್ಯರು —

ಇವರು ಆರ್ಯಮತ ಸಂಜೀವಿನಿ, ಕರ್ಣಾಟಕ ಕಾವ್ಯಕಲಾನಿಧಿ, ಕರ್ಣಾಟಕ ಕಾವ್ಯಮಂಜರಿ ಮಾಸಪತ್ರಿಕೆಗಳಲ್ಲಿ ಸಹಸಂಪಾದಕರಾಗಿಯೂ ಪ್ರತ್ಯೇಕವಾಗಿಯೂ ಅನೇಕ ಗ್ರಂಥಗಳನ್ನು ಪ್ರಚಾರಪಡಿಸಿದ್ದಾರೆ. ಅಲ್ಲದೆ ಹೊಸ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡ ಭಾಷೆಗೆ ಇವರು ಮಾಡಿರುವ ಸೇವೆಯು ಅಪಾರವಾದದ್ದು.

**ಚಂಪೂ ಗ್ರಂಥಗಳು:** (1) ಮಲ್ಲಿನಾಥಪುರಾಣ (2) ಅಜಿತತೀರ್ಥಕರ ಪುರಾಣ (3) ಅರ್ಥನೇಮಿ ಪುರಾಣ (4) ಚಂದ್ರಪ್ರಭ ಪುರಾಣ (5) ಲೀಲಾವತೀ ಪ್ರಬಂಧ (6) ಕಾವ್ಯಸಾರ (7) ಚಿಕ್ಕದೇವರಾಯವಿಜಯ (8) ಚಿಕ್ಕದೇವೇಂದ್ರ ವಂಶಾವಳಿ (9) ಗಿರಿಜಾಕಲ್ಯಾಣ (10) ಅಭಿನವ ದಶಕುಮಾರ ಚರಿತ್ರೆ (11) ಕಬ್ಬಿಗರಕಾವ ಇತ್ಯಾದಿ.

**ಷಟ್ಪದೀ ಗ್ರಂಥಗಳು:** (12) ನಳಚರಿತ್ರೆ (13) ಹರಿಶ್ಚಂದ್ರಕಾವ್ಯ (14) ಜೀವಂಧರ ಚರಿತ್ರೆ (15)ಭಾವಚಿಂತಾರತ್ನ (16)ನಂದೀಮಹಾತ್ಮ್ಯಂ (17)ಗಯಚರಿತ್ರೆ ಇತ್ಯಾದಿ.

**ಶ್ರೀವೈಷ್ಣವ ಗ್ರಂಥಗಳು:** (18) ದಿವ್ಯಸೂರಿ ಚರಿತ್ರೆ (19) ಚಿಕ್ಕದೇವರಾಯ ಬಿನ್ನಪಂ (20) ಅರ್ಥಪಂಚಕಂ (21)ಭಗವದ್ಗೀತಾರ್ಥ ಪ್ರತಿಪಾದನ ಕೀರ್ತನಂ (22)ಮುಕುಂದಮಾಲಾ (ಗೀತಾರೂಪ ಕನ್ನಡದಲ್ಲಿ) ಇತ್ಯಾದಿ.

**ಗದ್ಯ:** (23) ಶ್ರೀವಿಷ್ಣು ಪುರಾಣ (1, 2, 4, 5 ಇತ್ಯಾದಿ ಅಂಶಗಳು) (24) ಚಿಕ್ಕದೇವರಾಜ ವಂಶಾವಳೀ (25) ಶ್ರೀ ರಾಮಾಶ್ವಮೇಧ (26) ಅದ್ಭುತ ರಾಮಾಯಣ (27) ವತ್ಸರಾಜ ಚರಿತ್ರೆ ಇತ್ಯಾದಿ.

**ನಾಟಕ;** (27) ಮಿತ್ರವಿಂದಾ ಗೋವಿಂದ ನಾಟಕಂ.

**ನಿಘಂಟು:** 28) ಚತುರಾಸ್ಯ ನಿಘಂಟು (29) ಕರ್ಣಾಟಕ ನಿಘಂಟು (30) ರಳಕುಳ ನಿಘಂಟು (31) ಕರ್ಣಾಟಕ ಸಂಜೀವನಂ (32) ಕರ್ಣಾಟಕ ಶಬ್ದಸಾರಂ (33) ಕವಿಕಂಠಹಾರಂ ಇತ್ಯಾದಿ.

**ಶತಕ:** (34) ಪಂಪಾಶತಕ (35) ಶುಭಾಶುಭ ಮುಕ್ತಕ ಶತಕ (36) ಅಪರಾಜಿತೇಶ್ವರ ಶತಕ.

**ಸಂಕಲನ:** (37) ಜೀವೇಶ್ವರ ಸಾಂಗತ್ಯ (38) ಕಪೋತ ವಾಕ್ಯ (39) ಗಜೇಂದ್ರ ಮೋಕ್ಷ (40) ಗೀತಾಗೋಪಾಲ ಮುಕುಂದಂ (41) ಪ್ರಬಂಧಾವಳಿ (ಸ್ವಂತ ಗ್ರಂಥ) (42) ಪ್ರಮಾಣ ಪ್ರಮೇಯ ವಿವೇಕ (43) ಕವಿ ಸಮಯ (ಸ್ವಂತ) (44) ನಾಲ್ಕನೇ ರೀಡರ್ (ಸರ್ಕಾರದ ಪರವಾಗಿ) (45) ಬಾಗಿಲು ಭದ್ರ (ಸ್ವಂತ) (46) ಆದಿಪರ್ವ & ಸಭಾಪರ್ವ (joint) (47) ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರವರ ಭಾಷಣಗಳು (ಕನ್ನಡಕ್ಕೆ ಭಾಷಾಂತರ ಇತ್ಯಾದಿ.

✓ (೩೪) ಎಂ. ಬಿ. ವರದರಾಜೈಂಗಾರ್ಯರು 1937

(1) Sri Bhashya (translation associated with Prof. M. Rangacharya)

(2) Vedarthasangraha (Translation published serially in the Brahmavadin)

(3) Tatva-Mukta-Kalapa (Translated & not yet published

(೩೫) ಗೋಮಠ ಶ್ರೀನಿವಾಸ ಜೋಯ್ಸರವರು.

(1) ಋಗ್ವೇದ.

✓ (೩೬) ಪಂಡಿತದೇವಶಿಖಾಮಣಿ ಅಳಶಿಂಗ್ರಾಚಾರ್ಯರವರು (ಪ.ಕ್ರಿಶ. 1940)

(1) ಚಂಡಕೌಶಿಕ ನಾಟಕ (ಕಡೇ ಅಂಕ) (2) ಶಲ್ವನಾರಾಯಣಾ ಶತಕ (ಪದ್ಯ) (3) ಸ್ವಪ್ನವಾಸವದತ್ತ (ನಾಟಕ) (4) ಶ್ರೀಮತೀ ಪರಿಣಾಯ (ನಾಟಕ) (5)ರಾಮಾಯಣ (೮ ಭಾಗಗಳು) (೬) ಭಾಗವತ (೮ ಭಾಗಗಳು) (7) ಮಹಾಭಾರತ (೭ ಭಾಗಗಳು) (8) ಪ್ರಥಮ ಚಿಕಿತ್ಸೆ (ತರ್ಜುಮೆ) (9) ಯುದ್ಧವೂ ಆದರ ಪರಿಣಾಮವೂ (10) ಭಗವದ್ಗೀತೆ (11) ಪಂಚರಾತ್ರರೂಪಕಂ. (12) ಪಂಚಭಾಷಾ ಪ್ರಹಸನ ಮತ್ತು ಅನೇಕ ಲೇಖನಗಳು ಇತ್ಯಾದಿ.

(೩೭) ಶ್ರೀ ಶ್ರೀ ವಾಸನಂದಸ್ವಾಮಿಗಳು (ಎಂ.ಎ. ನಾರಣೈಯ್ಯಂಗಾರ್ಯರು)

Mysore Pradhans (joint-M. A. ಶ್ರೀನಿವಾಸಾಚಾರ್ಯರು)

(೩೮) ಪಂಡಿತ ದೇವಶಿಖಾಮಣಿ ರಾಮಾನುಜೈಯ್ಯಂಗಾರ್ಯರು.

(1) ತತ್ವಶುದ್ಧಿ (2) ಶಿವತತ್ವಸಾರ.

(೩೯) ಶ್ರೀ ಪರಮಹಂಸೇತ್ಯಾದಿ ಶ್ರೀ ಯದುಗಿರಿ ಯತಿರಾಜ ರಾಮಾನುಜ ಜೀಯರ್ ಸ್ವಾಮಿಗಳು (ಶ್ರೀ|| ಉ|| ಆಸೂರಿ ಅನಂದಾಳ್ವಾರ್ ಸ್ವಾಮಿಗಳು) (ಪ. 1943)

(1) ಕಾವ್ಯಮಂಜರಿ ( Editor) (2) ಪಾದ್ಮಸಂಹಿತೆ (Editor 2 volumes) (3) ಶ್ರೀ ಪೌಷ್ಕರ ಸಂಹಿತೆ (ರತ್ನತ್ರಯ) (4) ಶ್ರೀ ಕಾಶ್ಯಪ ಸಂಹಿತೆ (ವಿಷ ಚಿಕಿತ್ಸೆ) (5) ಅಷ್ಟಶ್ಲೋಕೀ (ಶ್ರೀ|| ಉ|| ವೇದಾಂತ ರಾಮಾನುಜ ಮುನಿಗಳವರ ಗ್ರಂಥ) (6) ಶ್ರೀಸದ್ವಿದ್ಯಾವಿಜಯಂ (7) ಅದ್ವೈತ ವಿದ್ಯಾವಿಜಯಂ (8) ಶಾರದಾತನಯ ಭಾವಪ್ರಕಾಶನಂ (9) ತಾಪಸವತ್ಸರಾಜನಾಟಕ (10) ಶೃಂಗಾರ ಪ್ರಕಾಶ (೨೨, ೨೩, ೨೪ ಭಾಗಗಳು) (11) ವಿಜಯಮಂಗಳ ದೀಪಿಕಾ.

ಈ ಮೇಲ್ಕಂಡ ಗ್ರಂಥಗಳು ಅಚ್ಚಾಗಿವೆ.

(12) ಕಾವ್ಯಪ್ರಕಾಶ (ಶ್ರೀ ಚಕ್ರವರ್ತಿಯ ವ್ಯಾಖ್ಯಾನಸಹಿತ) (13) ರಘುವಂಶದ ಅಕಾರಾದಿ (14) ಮೇಘದೂತ ಅಕಾರಾದಿ (15) ಜಾನಕೀಹರಣ (ಸಿಲೋನ್ ದೇಶದ ಒಬ್ಬ ರಾಜನಿಂದ ಕ್ರಿ.ಶ.೧೫೦೦) (16) ಶೃಂಗಾರ ಪ್ರಕಾಶ (೧ ರಿಂದ ೩ ಭಾಗಗಳು) (17)ಬಹ್ಮವಿದ್ಯಾವಿಜಯ (ಮಹಾಚಾರ್ಯ) (18)ಪರಿ

ಕರವಿಜಯ (ಮತ್ತಾಚಾರ್ಯ) (19) ಶೃಂಗಾರ ಪ್ರಕಾಶ (೪-೬ ಭಾಗಗಳು) (20) ಶ್ರೀ ಪರಮೇಶ್ವರ ಸಂಹಿತೆ (21) ಕುಮಾರ ಸಂಭವ (ಅಕಾರಾದಿ) (22) ಮಹಾಚಾರ್ಯರ ಶ್ರೀ ಭಾಷ್ಯ ವ್ಯಾಖ್ಯಾನ (23) ಉತ್ಸವ ಸಂಗ್ರಹ (24) ಶೃಂಗಾರ ಪ್ರಕಾಶ (೭ ರಿಂದ ೨೧, ೨೫ ರಿಂದ ೩೬ ಭಾಗಗಳು) (25) ಮಾನ ಸಾರಶಿಲ್ಪ (26) ಭರತನಾಟ್ಯಶಾಸ್ತ್ರ (27) ಪುರಾಣ ಮಾರ್ಗ ದೀಪಿಕಾ ಇತ್ಯಾದಿ ಇತ್ಯಾದಿ.

(೪೦) ಟಿ. ಪಿ. ಆನಂದಾಳ್ವಾರ್ಯರು.

(1) ರಿಂದ (6) ಕಾದಂಬರಿಗಳು ಮತ್ತು ಕಥೆಗಳು.

(೪೧) ಪ್ರೊಫೆಸರ್ ಎಂ. ಟಿ. ನಾಳಣ್ಯೆಯ್ಯಂಗಾರ್ಯರು.

Many articles in mathematical journals (About 22 in number)

(೪೨) Doctor ಎಂ. ಎ. ಸಂಪತ್ಕುಮಾರನ್‌ರವರು.

Many articles of research in Botany journals (about 14 in number)

(೪೩) ಎಸ್. ವಿ. ಗೋವಿಂದರಾಜೈಂಗಾರ್ಯರು (ಪ. 1946)

(1) ತಾಮಸ ಪ್ರಭುಚರಿತೆ (ಷಟ್ಪದಿ ಗ್ರಂಥ) (2) ಉಗ್ರಸೇನ ಪಟ್ಟಾಭಿಷೇಕ (3) ಸ್ಮಶಾನಗೀತೆ (ಪದ್ಯ) (4) ಶ್ರೀಮದನಂತಾರ್ಯಚರಿತೆ (ಗದ್ಯ) (5) ಶ್ರೀ ರಾಮಕೃಷ್ಣ ಚರಿತಾಮೃತಂ (೨ ಭಾಗಗಳು) (6) ಬಾಲ ರಾಮಾಯಣ (7) ಶ್ರೀಕೃಷ್ಣ ಸೇವಾವ್ರತಂ (ಪದ್ಯ) (8) ಪ್ರಿಂರೋಜ ವಿಜಯಂ (9) ಕೃಷ್ಣರಾಜವೈಭವಂ.

(೪೪) ಎಸ್. ಎನ್. ತಿರುಮಲಾಚಾರ್ಯರು.

(1) India-journal (ಈ ಪತ್ರಿಕೆಯ ಸಂಪಾದಕರು, ಪ್ರಕಾಶಕರು)

(೪೫) ಎಂ. ಎ. ತಿರುನಾರಾಯಣಾಚಾರ್ಯರು.

(1) Law Reports-Editor.

(೪೬) ಎಂ. ಸಿ. ಅಳಸಿಂಗ ಪೆರುಮಾಳ್‌ರವರು (ಪ. 1909)

(1) ಪ್ರತ್ಯವಾದಿನ್ Editor. (2) ಪ್ರಬುದ್ಧಭಾರತ, Native States, India, Weekly Review ಇತ್ಯಾದಿ ಪತ್ರಿಕೆಗಳಲ್ಲಿ ಲೇಖನಗಳು.

## ಜೀವಿಸಿರುವ ಗ್ರಂಥಕರ್ತರು

(೧) ಆರ್. ಆಳ್ವಾರೈಯ್ಯಂಗಾರ್ಯರು.

(1) ಅಂಕಗಣಿತ (೪ ಭಾಗಗಳು) (2) ಕ್ಷೇತ್ರ ಮತ್ತು ರೇಖಾಗಣಿತ (3) ಮಿತಸಂತಾನೋತ್ಪತ್ತಿ (4) ಯುವಕ ಮಂಡಲೀ ಪತ್ರಿಕೆ ಮುಂತಾದ ಪತ್ರಿಕೆಗಳಲ್ಲಿ ಲೇಖನಗಳು ಇತ್ಯಾದಿ.

(೨) ಆರ್. ತಿರುನಾರಣೈಯ್ಯಂಗಾರ್ಯರು (ಈಚೆಗೆಪರಂಧಾಮವನ್ನೈದ್ದಾರೆ)

(1) ಚಿಕ್ಕದೇವರಾಜವಿಣ್ಣಪ್ಪ (ತಮಿಳು ಮತ್ತು ಇಂಗ್ಲೀಷ್)

(2) ವಾರ್ತಾಮಾಲೆ (ಇಂಗ್ಲೀಷ್) (3) ವಿಶಿಷ್ಟಾದ್ವೈತ (ಇಂಗ್ಲೀಷ್–ಅಚ್ಚಾಗಿಲ್ಲ)

(೩) ಸಾಂಖ್ಯತೀರ್ಥ, ಸಾಂಖ್ಯವಿದ್ವಾನ್, ವೇದಾಂತ ವಿದ್ವಾನ್, ಆಸ್ಥಾನ ಮಹಾ ವಿದ್ವಾನ್ ಇತ್ಯಾದಿ ಜಗ್ಗು ವೆಂಕಟಾಚಾರ್ಯರು

(1) ರಸಗಂಗಾಧರ(ಮರ್ಮಪ್ರಕಾಶಿಕಾ)ಮರ್ಮೋದ್ಘಾಟನ (2) ಯಾದವಗಿರಿಮಹಾತ್ಮ್ಯಸಂಗ್ರಹ (3) ಲಕ್ಷ್ಮೀಸ್ತೋತ್ರಂ (4) ಬೃಂದಾವನ ವರ್ಣನಂ (5) ಯದುಗಿರಿ ನಾರಾಯಣಸ್ತವಂ (ಪರಿಷ್ಕರಿಸಿ ಅಚ್ಚು ಮಾಡಿಸಿದ್ದು) ಇತ್ಯಾದಿ.

(೪) ವಿದ್ವಾನ್ ಪೆರೀಸ್ವಾಮಿ ಶ್ರೀನಿವಾಸೈಯ್ಯಂಗಾರ್ಯರು.

(1) ಶಾಲಾ ಪಠ್ಯಪುಸ್ತಕಗಳ ಟೀಕೆಗಳು.

(೫) ಆಯುರ್ವೇದೋಪಾಧ್ಯಾಯ, ವೈದ್ಯವಲ್ಲಭ, ಪರೋಪಕಾರ ಕಾರ್ಯವಲ್ಲಭ ಎಂ. ಜಿ. ಶಿಂಗರೈಯ್ಯಂಗಾರ್ಯರು

(1) ಗೃಹವೈದ್ಯದ ಕೈಪಿಡಿ (ಕೆಲವುಭಾಗ ಅಚ್ಚಾಗಿದೆ) (2) ಪ್ರಾಣಿಗಳ ವಿಷಗಳಿಗೆ ಸುಲಭ ಚಿಕಿತ್ಸೆ (3) ಭರತಖಂಡದ ಪ್ರಾಚೀನ ಕಲೆಗಳು (4) ಹಿಂದೂದೇಶದ ಪ್ರಾಚೀನ ಚಿತ್ರಕಲೆ (ಲೇಖನ) (5) Oriental

Tit-bits in Engineering (part) (6) ಆಯುರ್ವೇದ ಪಂಡಿತರಿಗಾಗಿ ಆರಿಸಿದ ಅನುಭವದ ಯೋಗಗಳು (ಅಚ್ಚಾಗಿಲ್ಲ) (7) ಯೋಗ ರತ್ನಾಕರ (ಕನ್ನಡ ಭಾಷಾಂತರ ಅಚ್ಚಾಗಿಲ್ಲ) (8) Some experiments of engineering recipes of old (article)

(9) ಶ್ರೀ ಯದುಗಿರಿ ಯತಿರಾಜ ಜೀಯರ್ ಸ್ವಾಮಿಗಳವರ ಉತ್ತರ ದೇಶದ ಯಾತ್ರೆ (10) ಮಂಡಯಂ ಯುವಕ ಮಂಡಲೀ ಪತ್ರಿಕೆ; ಕನ್ನಡಿಗರ ಜ್ಞಾನದೀಪಿಕೆ; Mysore Engineer's Association Bulletin ಇವುಗಳಲ್ಲಿ ಲೇಖನಗಳು (11) ಆಯುರ್ವೇದದ ಸುಲಭ ಚಿಕಿತ್ಸೆಗಳು (3 Editions) (12) ಮಂಡಯಂ ಶ್ರೀವೈಷ್ಣವ ಮಹಾಜನರ ಚರಿತೆ ಇತ್ಯಾದಿ.

(೬) ಪ್ರೊಫೆಸರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ಯರು.
Various Research articles on Algae (ಪಾಚಿ)

(೭) ವಿದ್ವಾನ್, ಆರ್. ಎ. ಐಯ್ಯನ್ಯೈಯ್ಯಂಗಾರ್ ಸ್ವಾಮಿಗಳು.
(1) ಕರ್ಣಾಟಕ ಆಚಾರ್ಯ ಹೃದಯ (2) ಗೀತಾರ್ಥ ಸಂಗ್ರಹ (3) ಭಗವದ್ಗೀತೆ (ಕನ್ನಡ ಗದ್ಯಾನುವಾದ) (4) ಈಶಾವಾಸ್ಯೋಪನಿಷತ್ (ಕನ್ನಡ) (5) ಅಷ್ಟಶ್ಲೋಕೀ (ಕನ್ನಡ) (6) ಅನೇಕ ವಿಶಿಷ್ಟಾದ್ವೈತ ಉಪನ್ಯಾಸಗಳು.

(೮) ಎಂ. ಸಿ. ಕೃಷ್ಣಸ್ವಾಮ್ಯೈಯ್ಯಂಗಾರ್ಯರು (Bangalore)
(1) A guide to Kalidasa's Raghuvamsa (2) A guide to Bharitruhari's Neeti Sataka (3) Pancatanthra (4) ಬಾಲರಾಮಾಯಣ with notes
(5) ಶ್ರೀ ರಾಮಾಯಣಸಂಗ್ರಹ ದೀಪಿಕೆ (Sanskrit & Kannada)
(6) Articles on Sanatana Arya Dharma

(೯) ಎಂ. ಜೆ. ನರಸಿಂಹನ್‌ರವರು.
Several Botanical Research Articles

(೧೦) ಎಂ. ಎ. ನರಸಿಂಹಾಚಾರ್ಯರು (ಅಯ್ಯಾಧೊರೆ)
(1) ಟಗರಿನ ಕಾಳಗ (2) ಹೆಲಸಿನಹಣ್ಣಿನ ಮಾಯ (3) ವೌರಿಯ ನಿಂಗ ಪತ್ರಿಕೆಗಳಲ್ಲಿ ಕೆಲವು ಲೇಖನಗಳು

(೧೧) ಎಂ. ಆಜಿ. ನಾರಣೈಯ್ಯಂಗಾರ್ಯರು.
(1) ಮಾತೃಭೂಮಿಯ ಸೇವೆ (2) ಸಾಧನೋಪಾಯಗಳೂ ಮತ್ತು ಸಿದ್ಧೋಪಾಯವೂ (3) ಜ್ಞಾನವಿಕಾಸದ ಮಹತ್ವ (4) ಕನ್ನಡಿಗರ ಜ್ಞಾನದೀಪಿಕೆಯಲ್ಲಿ ಲೇಖನಗಳು (5) ವಿದ್ಯಾದಾಯಿನಿಯಲ್ಲಿ ಲೇಖನಗಳು (6) ಪ್ರಾಥಮಿಕ ವಿದ್ಯಾಭ್ಯಾಸದ ಕ್ರಮ ಇತ್ಯಾದಿ.

(೧೨) ಎಂ. ಸಿ. ಆಳಶಿಂಗ್ರಾಚಾರ್ಯರು (ಪರಂಧಾಮವನ್ನೈದಿದರು)
(1)ವಿಜ್ಞಾನಶಾಸ್ತ್ರ (2) ಕನ್ನಡಿಗರ ಜ್ಞಾನದೀಪಿಕೆಯಲ್ಲಿ ಲೇಖನಗಳು. (3) ನಿಜವಾದ ಸುಖವು ಎತರಲ್ಲಿದೆ? (4) ಮಂಡಯಂ ಯುವಕ ಮಂಡಲಿ ಪತ್ರಿಕೆಯಲ್ಲಿ ಲೇಖನಗಳು.

(೧೩) ಎಚ್. ಆರ್ ರಂಗಸ್ವಾಮಿ ಐಯ್ಯಂಗಾರ್ಯರು.
1) Mahabharata (Thesis in Historical Quarterly) (2) ವಾದವಿಧಿ (3) ದಿನ್ನಾಗನ ಪ್ರಮಾಣ ಸಮುಚ್ಚಯ (4) ಅನಂತನಾಥಪುರಾಣ (5) ಸಾಕ್ರೆಟೀಸನ ಸಂವಾದಗಳು (6) ಯಂಗ್ ಇಂಡಿಯಾದಲ್ಲಿ ಲೇಖನಗಳು (7) ವಿದ್ಯಾದಾಯಿನಿಯಲ್ಲಿ ಲೇಖನಗಳು ಇತ್ಯಾದಿ.

(೧೪) ಎಂ. ಎ. ದೊರೆಸ್ವಾಮಿ ಐಯ್ಯಂಗಾರ್ಯರು.
(1)ತ್ರಿಪುರ ದಹನ (2)ವಿಷ್ಯಾಖಂಡದ ಜಾಗೃತಿ (3)ಮಾಧವ ವಿದ್ಯಾರಣ್ಯ (4)ಧರ್ಮಜ್ಯೋತಿ (5)ಇಂಗ್ಲೆಂಡಿನ ಸರ್ಕಾರ ಕ್ರಮ (6) ರಿಂದ (20) ಜಯಕರ್ಣಾಟಕ ಮುಂತಾದ ಮಾಸಪತ್ರಿಕೆಗಳಲ್ಲಿ ಲೇಖನಗಳು. ಮತ್ತು ಅಚ್ಚಾಗದ ಲೇಖನಗಳು.

(೧೫) ಎಂ. ಎ. ಗೋಪಾಲಸ್ವಾಮಿ ಐಯ್ಯಂಗಾರ್ಯರು.
(1) Mysore Observer (Editor) (ಪತ್ರಿಕೆ) (2) ಖಾದೀ (3)

ಯಾಜ್ಞವಲ್ಕ್ಯ (4) ಇಂಡಿಯಾದೇಶದ ರಾಜ್ಯಾಂಗ ಪದ್ಧತಿ (5) ಗಾಂಧೀ ಕಥಾ ಪ್ರಸಂಗ (6) ಸ್ವದೇಶೀ ಹಾಡುಗಳು (7) ಮೈಸೂರು ರಂಗಭೂಮಿ (8) ಮಂಡಯಂ ಯುವಕ ಮಂಡಲಿ ಪತ್ರಿಕೆಯಲ್ಲಿ ಲೇಖನಗಳು (9) ಪ್ರೊಫೆಸರ್ ಎಂ. ರಂಗಾಚಾರ್ಯರ ಜೀವನಚರಿತ್ರೆ (10) Model Constitution for Mysore.

(೧೬) ಜಿ. ಆರ್. ಜೋಸ್ಯರವರು.

I) Sociology (joint) (2) Selections from Ingersol (Appreciation) (3) Tippu Sultan (4) Brahmanophobia (5) ವ್ಯಾಪಾರ (6) ಹುಡುಗರು ಮತ್ತು ಹುಡುಗಿಯರು (7) ಆರ್ಯ ಮಹಿಳಾ ಕೀರ್ತಿ (8) ಋಗ್ವೇದ (9) Rationalist (journal-editor) (10) ಕಾನೇಗಿ (11) Problem of wealth (12) ಮೈಸೂರು ದೇಶದ ಅರಸರ ಚರಿತ್ರೆ (ಇಂಗ್ಲೀಷ್) ಇತ್ಯಾದಿ.

(೧೭) ಎಂ. ಆರ್. ಸಂಪತ್ಕುಮಾರನ್‌ರವರು.

(1) Sri Krishna (2) Life of Anantarya (3) Several Magazine articles (4) Publisher EducationalReview (5) Sri Rama 6) Bhakthan (Editor)

(೧೮) ಎಂ. ಒ. ತಿರುನಾರಣ್ಯೈಯ್ಯಂಗಾರ್ಯರು.

Sevaral Research Articles on enomlogy & malaria.

(೧೯) ವಿದ್ವಾನ್ ಜಗ್ಗು ಶಿಂಗ್ರೈಯ್ಯಂಗಾರ್ಯರು.

(1) ಯಮಶೈಲಚಂಪೂ (2) ದಾಶರಥಿ ಚರಿತಂ (3) ಕೃಷ್ಣ ಕಥಾ ರಹಸ್ಯಂ (4) ವೈರಮುಡಿ ವೈಭವಂ (5) ಶ್ರೀಸ್ತವದಶಕಂ (6) ಯತಿರಾಜದಶಕಂ 7) ಒರಲಿನ ಭಾಗ್ಯ (8) ಮಾರುತಿ ಸ್ತೋತ್ರಂ (9) ನೀತಿಸಾರಾವಳೀ (10 ಅರ್ಜಿಯ ಅಚ್ಯುತ (11) ಸರ್ವಜ್ಞ ಪದಗಳು ಇತ್ಯಾದಿ.

(೨೦) ವಿದ್ವಾನ್ ಜಗ್ಗು ಆಳ್ವಾರೈಯ್ಯಂಗಾರ್ಯರು.

**ಗದ್ಯಕಾವ್ಯ**—(1) ಜಯಂತಿಕಾ (ಕಥೆ) (2) ಉಪಾಖ್ಯಾನ ರತ್ನ ಮಂಜೂಷಾ

3) ಭಾವ ಕೌಮುದೀ.

ಪದ್ಯಕಾವ್ಯ—4) ಕರುಣಾರಸ ತರಂಗಿಣೀ 5) ಪಥಿಕೋಕ್ತಿಮಾಲಾ 6) ಶೃಂಗಾರ ಲೀಲಾಮೃತಮ್.

ಚಂಪೂಕಾವ್ಯ—(7) ಯತಿರಾಜ ಚಂಪೂ (8) ಭಾರತಸಂಗ್ರಹ.

ನಾಟಕಗಳು—(9)ಅಮೃತಾಂಬುಕಂ (10) ಸ್ವಾಮಂತಕಂ (11) ಪ್ರತಿಜ್ಞಾ ಕೌಟಿಲ್ಯಂ (12) ಮಂಜುಳ ಮಂಜೀರಂ (13) ಬಲಿ ವಿಜಯ (ವ್ಯಾಯೋಗಂ) (14) ಅಮೂಲ್ಯಮಾಲ್ಯಂ (15) ಅಪ್ರತಿಮಾ ಪ್ರತಿಮಾ (16) ಮಣಿ ಹರಣಂ (17) ಯೌವರಾಜ್ಯ (ಏಕಾಂಕ) (18) ಪ್ರಸನ್ನ ಕಾಶ್ಯಪಂ (19) ಸಂಯುಕ್ತಾ (20) ವೀರಸೌಭದ್ರಮ್.

ಸ್ತೋತ್ರಗಳು—(21) ಹಯವದನ ಸ್ತೋತ್ರ (22 ಅಮೃತಾಥಿ ರೋಹಿಣೀ (23) ಲಕ್ಷ್ಮೀ ದಂಡಕಂ (24) ಯಮುಕ್ಕೈಲೇಶ ಶತಕಂ ಇತ್ಯಾದಿ.

(೨೧) ಎಂ. ಕೆ. ಶಿಂಗ್ಲಾಚಾರ್ಯರು.

(1) ಮಂಡಯದ ಚರಿತ್ರೆ (2) ಶ್ರೀವೈಷ್ಣವ ನಿಷ್ಠೆ (೨ ಭಾಗಗಳು)

(೨೨) ಎಂ. ಕೆ. ವರದರಾಜೈಯಂಗಾರ್ಯರು.

(1) Indian States and theFedertion

(೨೩) ಎಂ. ಎನ್. ಶ್ರೀನಿವಾಸನ್‌ರವರು.

(1) Hindu Law in Mysore.

(೨೪) ಎಂ. ಸಿ. ನರಸಿಂಹಾಚಾರ್ಯರು.

Editor of Brahmavadin from 1909-1914

(1) Methods of developing a business

(2) Fortunes in business & Law of Cause & Effect

(3)How Rs. 750 Can becom Rs. 4000 in twenty months

(4) Simple industries 5) Power of Perfumes.

(೨೫) ಎಂ. ಸಿ. ರಂಗಸ್ವಾಮಿಯವರು.

Editor of ವಿದ್ಯಾದಾಯಿನೀ for some years

(೩೬) ಎಂ. ಬಿ. ನರಸಿಂಹೈಯ್ಯಂಗಾರ್ಯರು.

1) Nyaya Bhaskara of Anandalwar (Translated and published serially in Mythic Society Journal)

2) Various articles in Educational Review

3) Vedantasara of SriRamanuja translated into English

(೩೭) ಎಂ. ಜಿ. ಶ್ರೀನಿವಾಸನ್‌ರವರು.

Articles on Engineering Topics such as 'Brick-nogged Terrace

(೩೮) ಡಾಕ್ಟರ್ ಎಂ. ಜೆ. ತಿರುಮಲಾಚಾರ್ಯರು.

Several Research articles on Botany

(೩೯) ಎಂ. ಎ. ಶ್ರೀನಿವಾಸನವರು.

Advocate, Madras

(1) ಲೀಲಾಸ್ ಬೆಟ್ (ಹಿಂದು ಇಲ್ಲಸ್ಟ್ರೈಟೆಡ್ ವೀಕ್ಲಿ)
(2) ದಿ ಪೋಸ್ಟ್ ಆಫೀಸ್: (ಮೆರ್ರಿ ಮೇಗ್‌ಜೈನ್)
ದಿ ತರ್ಡ್ ಲೆಗ್: ( ,, ,, )
ಮಚ್ ಅಡೋ ಅಬೌಟ್ ನತಿಂಗ್: ( ,, ,, )
ಎವೆರಿ ಮಿಕ್ಸೆಡ್ ಡಬ್ಲ್ಸ್: ( ,, ,, )
ಕಮಲಾವಿನ್ ಕಲ್ಯಾಣಂ: (ಆನಂದ ವಿಕಟನ್ ದೀಪಾವಳಿ ಮಲರ್)
ಯಾನೈಯಿನ್ ನನ್ರಿ: (ಆನಂದ ವಿಕಟನ್)
ವಿಡಾಮುಯರ್ಚಿ ಪುರಾಣಂ: ,,
ರಾಜಿಯಿನ್ ಯೋಜನೈ: ,,
ಜಡ್ಜ್ ಚಿನ್ನಸ್ವಾಮಿ ಅಯ್ಯರ್: ,,
ಅಶಟ್ಟುಕ್ಕೇಳ್ವಿಹಳ್: ,,
ಪುದು ಅಗ್ರಾಶನರ್: ,,
ಪಾಯಿನ್ ಅಡಿಯಲ್ ನುೞೈನ್ದಾಲ್: ,,
ಕಾಪ್ಪಿ ನಿನೈವುಹಳ್: ,,

ಪರಿಕ್ಷೈ ತವರಿಯದೇ ,,
ಪೊಲ್ಲಾದ ಮನಂ: ,,
ಪ್ರೇಮಾಹರ: ,,
ಸ್ತ್ರೀಹಳ್ ಶೀರ್ ರೆರುತ್ತಶಿಮಷೋದಾ: ,,
ನೋಯಟ್ರ ವಾಲಿವು: ,,
ಇಲವಶ ವಿಳಂಬರಂ: ,,
ನಾದ್ದಿ ನಿಷ್ಠೂರಂ: ,,
ಕರ್ಣ ತಿರುಪ್ಪಿಕೊಡುತ್ತ ಪಡಲಂ: ,,
ಕೊಟ್ಟಾಕ್ಕಟ್ಟೈ ಮಾಮಾ: (ಸ್ವದೇಶಮಿತ್ರ)
ಯಾರುಕ್ಕೋಟ್ ಎನಕ್ಕೋಟ್: (ವಿಚಿತ್ರ)
ಎನ್ನೈಕೇಟ್ಕಾದೀರ್ ಹಳ್: (ಆನಂದವಿಕಟ)

**ರೇಡಿಯೋ ನಾಟಕಗಳು:**

ಶುದ್ಧ ಪೈತ್ತಿಯಕ್ಕಾರ: (Prize play)
ಚಿದಂಬರ ಮಹತ್ವಂ:
ಎದಿರ್ ಪಾರಾದುದು:

(೩೦) ಎಸ್. ಶ್ರೀನಿವಾಸಾಚಾರ್ಯರು.

(1) Transalations into Tamil from Tagore
(2) Transalations from the Frenrch of Moliere into Tamil.
(3) ಆಡಿ ಪಾಂಡ್ಯನ್.
(4) ಯುಗಸಂಧಿ.
(5) Several articles in Journals

(೩೧) ಎಂ. ಎ. ಜಾನಕಿ.

(1) Bar Council Lecture.

(೩೨) ಎಂ. ಎ. ರುಕ್ಮಿಣಿ.

(1) Several articles in Aryan Path Astrological Magazine etc.

# ಪ್ರಕರಣ ೯ ✓

## ಮಿಶ್ರವಿಷಯಗಳು

ಪಾಜ್ಞವಾಗಿ ಹೊಂದಿಸಿ ಬರೆಯಲಾಗದ ನಮ್ಮವರ ಚರಿತ್ರೆಯ ಬಿಡಿ ಅಂಶಗಳನ್ನು ನಿರೂಪಿಸುವ ಪ್ರಕರಣವಿದು. ನೂರಾರು ಅಂಶಗಳನ್ನು ಎತ್ತಿ ಹೇಳಬಹುದು. ತ್ವರೆಯಲ್ಲಿ ಒದಗಿದ ಕೆಲವು ವಿಷಯಗಳನ್ನು ಮಾತ್ರ ಬಿನ್ನವಿಸಿದೆ.

## ನಮ್ಮ ಸ್ತ್ರೀಯರು ಮತ್ತು ಪುರುಷರ ಹೆಸರುಗಳು

ನಾವು ಮಂಡಯಂದವರಾಗಿ ನಮ್ಮ ಪೂರ್ವಜರ ಮಾತೃಸ್ಥಾನದ ದೇವಸ್ಥಾನವು ಶ್ರೀ ಲಕ್ಷ್ಮೀಜನಾರ್ದನ ಸ್ವಾಮಿಯವರದಾಗಿದ್ದರೂ, ನಮ್ಮ ದೇವರಿಗೆ "ಮಕ್ಕಳ ಜನಾರ್ದನನೆಂಬ" ವಿಶೇಷ ನಾಮಾಂಕಿತವಿದ್ದರೂ, ನಮ್ಮಲ್ಲಿ ಜನಾರ್ದನನೆಂಬ ಹೆಸರು ಎಲ್ಲೋ ಒಂದೇ ಒಂದು ಇರುವುದು ಬಹಳ ಆಶ್ಚರವಾಗಿದೆ. ಕಾರಣ ಗೊತ್ತಿಲ್ಲ. ಗಂಡಸರಲ್ಲಿ ಶ್ರೀನಿವಾಸ ವೆಂಕಟಾಚಾರ್ಯ, ತಿರುಮಲೈ, ತಿರುವೇಂಗಡನ್ ಮುಂತಾದ ಹೆಸರೇ ಹೆಚ್ಚು ಸಂಖ್ಯೆಯಲ್ಲಿದೆ. ಇದಾದಮೇಲೆ "ನರಸಿಂಹ" (ಆಳಶಿಂಗರ್, ಶಿಂಗ್ರೈಯ್ಯಂಗಾರ್); "ಕೃಷ್ಣ" (ಗೋಪಾಲ, ರಾಜಗೋಪಾಲ, ಪಾರ್ಥಸಾರಥಿ, ರಾಜಮನ್ನಾರ್); ನಾರಾಯಣ; ರಂಗ; ಸಂಪತ್ಕುಮಾರ; ರಾಮಾನುಜ; ಅನನ್ತಾಳ್ವಾರ್; ಈ ವರಿಸೆಯಲ್ಲಿ ಬರುವಂತೆ ತೋರುತ್ತದೆ. ಇತರ ಹೆಸರು ಕಡಿಮೆ ಸಂಖ್ಯೆಯವು. ರಾಜಂ, ಪದ್ಮನಾಭನ್, ವರದರಾಜನ್, ರಾಮನ್, ಅಪ್ಪಳಾಚಾರ್, ಆಳ್ವಾರ್, ರಾಘವನ್, ವೆಂಕಟರಂಗನ್, ಗೋವಿಂದ, ಶ್ರೀವತ್ಸ, ಅಚ್ಯುತೈಯ್ಯಂಗಾರ್, ಅಪ್ರಮೇಯ ಅಯ್ಯಂಗಾರ್, ಶಾಮೈಯ್ಯಂಗಾರ್, ಶ್ರೀಶೈಲಂ, ರಘುನಾಥ, ರಾಜಸಿಂಹ, ಜಯಸಿಂಹ, ಶ್ರೀಪತಿ ಈ ಹೆಸರುಳ್ಳ ಮಹನೀಯರೂ ವಿರಳವಾಗಿ ಇರುವಂತಿವೆ. ಗೊತ್ತಾಗಿ ಹೇಳಲಾಗುವುದಿಲ್ಲ.

ನಮ್ಮ ಸ್ತ್ರೀಯರ ಹೆಸರಿನಲ್ಲಿ ಯಗ್ಗಮ್ಮ (ಯದುಗಿರಿಯಮ್ಮ), ಶ್ರೀರಂಗಮ್ಮ, ವೇಂಗಡಮ್ಮ, ವೇದವಲ್ಲಿ, ಆಂಡಾಳ್, ರುಕ್ಮಿಣಿ, ಶಿಂಗಾರಂ,



ಮೊದಲನೆಯ ಮಂಡ್ಯ ಮಹಿಳಾ ಸಮ್ಮೇಳನ, ಮಂಡ್ಯ

ತಿಮ್ಮಮ್ಮ ಈ ಹೆಸರುಗಳೇ ಹೆಚ್ಚು. ಅನಂತರ ಅಲಮೇಲಮ್ಮ, ಶಿಂಗಮ್ಮ, ತಂಗಚ್ಚಮ್ಮ, ಸೀತೆ, ಜಾನಕಿ, ಪೆರುಂದೇವಿ, ಕಮಲ, ಕಲ್ಯಾಣಿ ಈ ಹೆಸರುಗಳು ಬರುವಂತಿವೆ. ಈಚೀಚೆಗೆ ನಮ್ಮ ಸ್ತ್ರೀಯರಲ್ಲಿ ಈ ಕೆಳಗೆಕಂಡ ಹೊಸ ಹೆಸರುಗಳು ಬಂದಿವೆ:—

ಪರಿಮಳಾ, ಶಕುಂತಳಾ, ನಾಗಮ್ಮ, ದ್ವಾರಕೀ, ವೈದೇಹೀ, ಶ್ರೀಮತೀ, ಮೈಥಿಲೀ, ಪ್ರಭಾ, ರಮಾ, ಕಿಟ್ಟಮ್ಮ, ಶಾಂತಕುಮಾರಿ, ಪಂಕಜ, ಮೈತ್ರೇಯಿ, ಭಾರತಿ, ಮಂಜುಳಾ, ಮಾಲತಿ, ಸರೋಜ, ಸುಶೀಲಾ, ಕಸ್ತೂರಿ, ರಾಜಮ್ಮ, ಜಯಮ್ಮ, ರಾಜಕುಮಾರಿ, ಪುಷ್ಪವಲ್ಲಿ, ಮೀರಾ, ಗೀತಾ, ಸುಧಾ, ಪದ್ಮಾ ಇತ್ಯಾದಿ.

ಈಚೆಗೆ ಇತರ ಆಧುನಿಕ ಸ್ತ್ರೀಯರನ್ನನುಸರಿಸಿ ನಮ್ಮವರ ಹೆಸರುಗಳೂ ಮಾರ್ಪಾಡಾಗಿವೆ. ಆದುದರಿಂದ ಹೆಸರಿನಿಂದಲೇ ಇವರು ಮಂಡಯದವರು ಎಂದುಗೊತ್ತು ಹಿಡಿಯುವುದು ಕಷ್ಟ.

## ಹೆಣ್ಣುಮಕ್ಕಳ ಮದುವೆಯ ವಯಸ್ಸು

ಹಿಂದೆ ನಮ್ಮವರಲ್ಲಿ ಬಹಳ ಚಿಕ್ಕ ವಯಸ್ಸಿನಲ್ಲೇ ಹೆಣ್ಣುಮಕ್ಕಳಿಗೆ ಮದುವೆಯಾಗಿದೆ. ಇತರ ಬ್ರಾಹ್ಮಣ ಪಂಗಡಗಳಲ್ಲಿಯೂ ಇದೇ ಪದ್ಧತಿ ಇತ್ತು.

ಐದು ವಯಸ್ಸಿಗೆ ಒಳಪಟ್ಟು ಮದುವೆಯಾದ ಕೆಲವು ಉದಾಹರಣಗಳು:—(೧) ಶ್ರೀ|| ಉ|| ಅಪ್ಪಳಾಚಾರ್ ಸ್ವಾಮಿಗಳ ತಾಯಿ ಶ್ರೀರಂಗಮ್ಮನವರು (೧೮ ತಿಂಗಳ ಮಗು) (೨) ಶ್ರೀ|| ಉ|| ಮದರಾಸ್ ಟಿಪ್ಪಣಿ ತಿರುಮಲಾಚಾರ್ಯರ ಹೆಂಡತಿ ಆಂಡಾಳಮ್ಮನವರು (೧೮ ತಿಂಗಳ ಮಗು) (೩) ಮಂಡಯದ ಜಟಾವಲ್ಲಭ ಶಿಂಗರೈಯ್ಯಂಗಾರ್ಯರ ತಾಯಿ ಶ್ರೀರಂಗಮ್ಮನವರು (೨ ವರ್ಷ) (೪) ಮಳೂರು ಆನಂದಾಮ್ಪಿಳ್ಳೈ, ಅಲಮೇಲಮ್ಮನವರು (೫ ವರುಷ) (೫) ಶ್ರೀ|| ಉ|| ಹೊನ್ನಲಗೆರೆ ರಾಮಾನುಜೈಯ್ಯಂಗಾರ್ ಸ್ವಾಮಿಗಳ ಹೆಂಡತಿ ಶ್ರೀರಂಗಮ್ಮನವರು (೫ ವರುಷ) (೬) ಶ್ರೀ|| ಉ|| ಟಿಪ್ಪಣಿ ಶಿಂಗ್ರಾಚಾರ್ಯರ ಹೆಂಡತಿ ತಂಗಚ್ಚಮ್ಮನವರು (೫ ವರುಷ) (೭) ಶ್ರೀ|| ಉ||

ಅಯ್ಯಾದೊರೆ ತಿರುಮಲೈಯ್ಯಂಗಾರ್ಯರ ಹೆಂಡತಿ ಶ್ರೀರಂಗಮ್ಮನವರು (೩ ವರುಷ (೮) ಮಲ್ಲೇಶ್ವರದ ಅನಂದಾಂಪಿಳ್ಳೈ ಶ್ರೀನಿವಾಸಾಚಾರ್ಯರ ಹೆಂಡತಿ ವೇದಮ್ಮನವರು (೩ ವರುಷ) (೯) ಕರ್ನೂಲ್ ವರದರಾಜೈಯ್ಯಂಗಾರ್ಯರ ಹೆಂಡತಿ ಅಲಮೇಲಮ್ಮನವರು (೩ ವರುಷ) (೧೦) ಕಡ್ಡಿ ಶ್ರೀರಂಗಮ್ಮನವರ ಸೊಸೆ ವೇಂಗಡಮ್ಮನವರು (೫ ವರುಷ) (೧೧) ಪೆರೀಸ್ವಾಮಿ ತಿರುಮಲೈಯ್ಯಂ ಗಾರ್ಯರ ಹೆಂಡತಿ ತಿಮ್ಮರಸಮ್ಮನವರು (೩ ವರುಷ) (೧೨) ಶ್ರೀ ಯೋಗೀ ಪಾರ್ಥಸಾರಥಿ ಅಯ್ಯಂಗಾರ್ಯ ಸ್ವಾಮಿಗಳ ಅಕ್ಕ ಯದುಗಿರಿಯಮ್ಮನವರು ತಮ್ಮ ಒಂದನೆಯ ವಯಸ್ಸಿನಲ್ಲೇ ವಿಧವೆಯಾದರಂತೆ.

ಈಗ ೬೦—೭೦ ವರುಷಗಳ ಹಿಂದಿನ ಮಾತು ಇದು. ನಮ್ಮ ಹಿರಿಯ ಮಹನೀಯರಿಬ್ಬರು ಮಂಡಯದ ಕೆರೆಗೆ ಸಾಯಂಕಾಲ ಸಂಧ್ಯಾವಂದನೆಗಾಗಿ ಹೋಗಿದ್ದ ವೇಳೆಯಲ್ಲಿ ವಿನೋದವಾಗಿ “ ನಿಮ್ಮ ಹೆಂಡತಿ ಹೆಣ್ಣು ಹೆತ್ತರೆ ನನ್ನ ಮಗನಿಗೆ ಆ ಹೆಣ್ಣನ್ನು ಮದುವೆಮಾಡಿಕೊಡಬೇಕು,” ಎಂದು ಒಬ್ಬರು ಇನ್ನೊಬ್ಬರಿಗೆ ಹೇಳಿದರಂತೆ. “ ಆಗಬಹುದು ” ಎಂದರಂತೆ ಇನ್ನೊಬ್ಬರು. ಕೂಸು ಹೆಣ್ಣಾಗಿ ಹುಟ್ಟಿ ಅದಕ್ಕೆ ೨ ವಯಸ್ಸು, ಗಂಡಿಗೆ ೪ ವಯಸ್ಸು ಆಗಿ ದ್ದಾಗ ಮಕ್ಕಳನ್ನು ಎತ್ತಿಕೊಂಡು ಮದುವೆಮಾಡಿದರಂತೆ.

## ಅಳಿಸಿಹೋದ ಕೆಲವು ಕುಟುಂಬಗಳ ವಿಷಾದ ವಿಷಯ

ಈಗ ೩೦-೪೦ ವರುಷಗಳೀಚೆಗೆ ಸುಮಾರು ೨೦ ಕುಟುಂಬಗಳು ಅಳಿಸಿ ಹೋಗಿರುವ ವಿಷಯವು ಬಹಳ ವಿಷಾದ ಸಂಗತಿ. ಕಡೆಯದಾಗಿ ಯಾರ ಮರಣದಿಂದ ಹಾಗೆ ಆಯಿತು ಎನ್ನುವುದನ್ನು ಈ ಕೆಳಗೆ ಬರೆದಿದೆ.

(೧) ಮಂಡಯದ ಮನಿಷಿ ಮುದುಕಮ್ಮನವರು ಸಂಪಳ್ಳಿ ಕುಪ್ಪಣ್ಣ ನವರ ಹೆಂಡತಿಯ ತಂಗಿ (೧೯೦೮)

(೨) ಶ್ರೀ|| ಉ|| ರಂಗಯ್ಯರ್ ಶ್ರೀನಿವಾಸೈಯ್ಯಂಗಾರ್ಯರ ಮಗಳು ವೇಂಗಡಮ್ಮನವರು (೧೯೦೮)

(೩) ಶ್ರೀ|| ಉ|| ಅರಕೆರೆ ನರಸಿಂಹಾಚಾರ್ಯರ ಮಗಳು ಶ್ರೀರಂಗಮ್ಮ ನವರ—ಶ್ರೀರಂಗಪಟ್ಟಣದ ಶ್ರೀ|| ಉ|| ಅಣ್ಣಾಸಾಮಿ ರಾಮಾನುಜೈಯಂಗಾ

ರ್ಯರ ಸೊಸೆ (೯೧೧)

(೪) ರಾಮಾನುಜಪುರಂ ಜಂಗಕ್ಕನವರು—ರಾಮಾನುಜಪುರಂ ಶ್ರೀ|| ಉ|| ವೆಂಕಟಾಚಾರ್ಯ ಸ್ವಾಮಿಗಳವರ ಅಕ್ಕನವರು.

(೫) ಶ್ರೀ|| ಉ|| ಮೈಸೂರು ಕುಟ್ಟಿಯಪ್ಪಾಜಿ ಅಳಶಿಂಗ್ರಾಚಾರ್ಯರು (೧೬೧೪)

(೬) ಮಳೂರು ಚಿಂಗಕ್ಕನವರು (೯೧೬)

(೭) ಚೊಕ್ಕ ತಿತ್ತಿಯವರು (೯೧೮)

(೮) ಮದರಾಸಿನ ಆಟರ್ನಿ ನರಸಿಂಹಾಚಾರ್ಯರ ಹೆಂಡತಿ ವೇದಮ್ಮನವರು (೯೨೦)

(೯) ಅಯ್ಯಾದೊರೆ ಶ್ರೀರಂಗಮ್ಮನವರು (೯೧೬)

(೧೦) ಮದರಾಸಿನ ಯಗ್ಗಮ್ಮನವರು (ಚೊಡಲಮ್ಮನವರು) (೯೯)

(೧೧) ಮದರಾಸಿನ ಶ್ರೀ||ಉ|| ಶ್ರೀಮನ್ನಾರಾಯಣನ್‌ರವರು (೯೨೦)

(೧೨) ಶ್ರೀ|| ಅಣ್ಣಾದೊರೆ ಕೃಷ್ಣಮಾಚಾರ್ಯರ ಹೆಂಡತಿ ಶಿಂಗಾರಮ್ಮನವರು (೯೨೩)

(೧೩) ಶ್ರೀ|| ತಿರುಪತಿ ಗಿಡ್ಡಯ್ಯನ್ ತಿರುನಾರಣೈಯ್ಯಂಗಾರ್ಯರು.

(೧೪) ಮೈಸೂರು ಶ್ರೀ ಗೋದಿ ಶ್ರೀರಂಗಮ್ಮನವರು (೯೨೬)

(೧೫) ಶ್ರೀ|| ಎಂ. ಟಿ. ನಾರಣೈಯ್ಯಂಗಾರ್ಯರ ಮಗಳು ಶಿಂಗಾರಮ್ಮನವರು (೯೨೬)

೧(೬) ಶ್ರೀ|| ಮದರಾಸ್ ನಾಯಕರ್ ಎಂಬೆರುಮಾನಾರ್‌ರವರ ಅಕ್ಕ ತಿಮ್ಮರಸಮ್ಮನವರು (೯೨೭)

(೧೭) ಶ್ರೀ|| ಮಕರ ನಾರಣೈಯ್ಯಂಗ್ಯಾರು (೯೨೮)

(೧೮) ಶ್ರೀ|| ಮೈಸೂರು ಶಾಮರಾಯರ ತಂಗಚ್ಚಮ್ಮನವರು (೯೩೫)

(೧೯) ಶ್ರೀ|| ಉ|| ಮುದಿಗುಂಬಂ ತಿರುಮಲಾಚಾರ್ಯರ ಹೆಂಡತಿ ಯಗ್ಗಮ್ಮನವರು (೯೩೮)

(೩೦) ಶ್ರೀ|| ಮದರಾಸ್ ನಾಯಕರ್ ಎಂಬೆರುಮಾನಾರ್ ಮಗಳು ರಾಜಾಮಣಿಯಮ್ಮನವರು (೧೯೪೫)

(೩೧) ಶ್ರೀ|| ದಿವಾನ್‌ಬಹದೂರ್ ಎಂ. ಓ. ಪಾರ್ಥಸಾರಥಿ ಅಯ್ಯಂಗಾರ್ಯರ ಹೆಂಡತಿ ಶ್ರೀರಂಗಮ್ಮನವರು (೧೯೪೭)

(೩೨) ಶ್ರೀ|| ಉ|| ಯೋಗಿ ಪಾರ್ಥಸಾರಥಿ ಅಯ್ಯಂಗಾರ್ ಸ್ವಾಮಿಗಳ ಹೆಂಡಿತಿ ಶಿಂಗಮ್ಮನವರು (೧೯೪೩)

ಮೇಲ್ಕಂಡ ಮಹನೀಯರಲ್ಲಿ ಒಬ್ಬಿಬ್ಬರಿಗೆ, ಸ್ವೀಕೃತ ಪುತ್ರರು ಇರಬಹುದೆಂದು ಅನುಮಾನವಾಗಿದೆ. ತಪ್ಪುಬರವಣಿಗೆ ಇದ್ದರೆ ಬಹಳ ವಿಷಾದದಿಂದ ಕ್ಷಮಾಪಣೆಯನ್ನು ಬೇಡುವುದಲ್ಲದೆ ಅಂತಹ ಸಂತತಿಗಳು ಅಭಿವೃದ್ಧಿಹೊಂದಲೆಂದು ಪ್ರಾರ್ಥಿಸಲಾಗಿದೆ.

## ವಿದ್ಯಾಭ್ಯಾಸ, ಐಶ್ವರ್ಯ, ಉದ್ಯೋಗ

ವಿದ್ಯಾಭ್ಯಾಸವು ನಮ್ಮವರಲ್ಲಿ ಮೊದಲಿಗಿಂತಲೂ ಈಗ ಸರಾಸರಿಯಲ್ಲಿ ಹೆಚ್ಚಾಗಿದೆ; ಸ್ತ್ರೀಯರಲ್ಲಿಯೂ ಸಹ. ಆದರೆ ಹಿಂದೆ ಇದ್ದಂತೆ ಅತಿಪ್ರಖ್ಯಾತರಾದ ಮಹನೀಯರ ಸಂಖ್ಯೆ ಕಡಿಮೆ ಎಂದು ತೋರುತ್ತೆ. ವಿದ್ವತ್ತು ನಮ್ಮವರಲ್ಲಿ ತುಂಬಿದೆ. ಆದರೆ ಸಮಯ ದೊರಕದೆಯೂ, ಅನುಕೂಲವಿಲ್ಲದೆಯೂ, ಪ್ರೋತ್ಸಾಹವಿಲ್ಲದೆಯೂ, ಬ್ರಾಹ್ಮಣ್ಯಕ್ಕೆ ಒದಗಿರುವ ಕೆಲವು ಮುಖ್ಯ ತೊಂದರೆಗಳಿಂದಲೂ ವಿದ್ವತ್ತು ಹಿಂದಿನಂತೆ ಶೋಭಿಸುತ್ತಿಲ್ಲ ; ಬೆಳೆಯುತ್ತಿಲ್ಲ ; ಫಲದಾಯಕವಾಗಿಲ್ಲ.

ನಮ್ಮ ಸ್ತ್ರೀಯರು ಪ್ರೌಢ ವಿದ್ಯಾಭ್ಯಾಸವನ್ನು ಅನೇಕರು ಮಾಡಿದ್ದಾರೆ. ವಿಜ್ಞಾನಶಾಸ್ತ್ರದಲ್ಲಿ, ಕುಶಲ ವಿದ್ಯೆಗಳಲ್ಲಿ, ವೈದ್ಯಶಾಸ್ತ್ರದಲ್ಲಿ, ನ್ಯಾಯಶಾಸ್ತ್ರದಲ್ಲಿ ವಿದುಷಿಯರಿದ್ದಾರೆ.

## ನಮ್ಮವರ ಕೆಲವು ಸಂಪ್ರದಾಯಗಳು

ನಮ್ಮ ಹಿರಿಯರು ಅನುಸರಿಸುತ್ತಿದ್ದ ಸಂಪ್ರದಾಯಗಳೇ ನಮಗೆ ಸತ್ಸಂಪ್ರದಾಯಗಳು. ಈ ಸಂಪ್ರದಾಯಗಳನ್ನೆಲ್ಲಾ ಒಂದುಗೂಡಿಸಿ ಬರೆದಿಟ್ಟಿದ್ದ

ಒಂದು ಪ್ರತಿಯು ಶ್ರೀ|| ಉ|| ಕಲ್ಕಿಸ್ವಾಮಿಗಳವರಲ್ಲಿದ್ದುದು ತಿಳಿದಿದೆ. ಈ ಪ್ರತಿಯು ದೊರೆತರೆ ಉತ್ಕೃಷ್ಟವಾದ ನಮ್ಮವರ ಹಿಂದಣ ಚರಿತ್ರೆಯ ಸಾರಾಂಶವೇ ದೊರೆತಂತಾಗುತ್ತದೆ. ಇದರಲ್ಲಿ ವೈದಿಕ ಲೌಕಿಕ ಧರ್ಮಗಳೆರಡರ ಆಚರಣೆಗಳೂ ತಿಳಿಸಲಾಗಿದೆಯೆನ್ನುತ್ತಾರೆ.

ಅಲ್ಲಲ್ಲಿ ದೊರೆತ ಕೆಲವು ಅಂಶಗಳನ್ನು ಇಲ್ಲಿ ಬಿಡಿ ಬಿಡಿಯಾಗಿ ಬರೆದಿದೆ.

೧. ಪ್ರಪನ್ನಾಗ್ರೇಸರರಾದ ನಮ್ಮ ಹಿರಿಯರು ದಿವ್ಯದೇಶವಾಸಕ್ಕೇ ಬಹಳ ಹೆಚ್ಚಿಗೆಯನ್ನಿತ್ತರು. ಇವಾಗದಿದ್ದವರು ದಿವ್ಯದೇಶಸಂಬಂಧವನ್ನು ಹೊಂದಿ ತಾವು ಇರುವಲ್ಲಿಯೇ ಒಂದು ಭಗವತ್ಸನ್ನಿಧಿಯನ್ನು ಪ್ರತಿಷ್ಠಿಸಿಕೊಂಡು, ಅಲ್ಲಿ ಭಗವದ್ಭಾಗವತಾಚಾರ್ಯರುಗಳ ಆರಾಧನೋತ್ಸವಾದಿಗಳನ್ನು ವಿಶೇಷ ವೈಭವದಿಂದ ನಡೆಸಿಕೊಂಡು ಬಂದಿರುವರು. ಮಂತ್ರ ಜಪಾದಿಗಳಲ್ಲಿಯೂ, ಉಪಾಸನಧ್ಯಾನಾದಿಗಳಲ್ಲಿಯೂ ನಮ್ಮ ಹಿರಿಯರು ಹೆಚ್ಚಾಗಿ ಕಾಲವನ್ನು ಕಳೆಯದೆ ಭಗವತ್ಸನ್ನಿಧಿಗೆ ಮಂಗಳಾಶಾಸನಕ್ಕಾಗಿ ತತ್ತತ್ಕಾಲಕ್ಕೆ ಬಂದು ಸೇರುವುದೇ ನಮ್ಮವರ ಮುಖ್ಯ ಸಂಪ್ರದಾಯ. 'ಆಜ್ಞಾಕೈಂಕರ್ಯ'ಕ್ಕಿಂತ 'ಸಾಕ್ಷಾತ್ಕೈಂಕರ್ಯ'ವೇ ಹೆಚ್ಚೆಂಬುದು ನಮ್ಮ ಹಿರಿಯರ ಮತ. 'ಆಜ್ಞಾಕೈಂಕರ್ಯ'ವಾದ ಸಂಧ್ಯಾವಂದನಾದಿ ಕಾಲಗಳು ಪ್ರಾಪ್ತವಾಗಿದ್ದರೂ ಭಗವತ್ಸಾನ್ನಿಧ್ಯವೇ ಹಿರಿದೆಂದು ಅರಿತು ಉತ್ಸವಾದಿಗಳನ್ನು ಸೇವಿಸಿದ ಅನಂತರವೇ ಸಂಧ್ಯಾವಂದನಾದಿಗಳನ್ನು ನಡೆಯಿಸುತ್ತಿದ್ದುದೇ ನಮ್ಮ ಹಿರಿಯರ ಸಂಪ್ರದಾಯ. ಭಗವದನುಭವವೂ ಭಾಗವತಗೋಷ್ಠಿಯೂ ಪ್ರಾಪ್ಯತಮವೆಂದೇ ನಮ್ಮವರ ಸಿದ್ಧಾಂತ.

೨. ನಮ್ಮವರಲ್ಲಿ ವ್ರತಾಚರಣೆಗಳಿಲ್ಲ. ಆದರೂ ನಮ್ಮ ಸ್ತ್ರೀಯರು ವ್ರತಾಚರಣೆಯೋ ಎಂಬಂತೆ 'ಆನೆಹಬ್ಬವನ್ನು' ತಿರುಕಾರ್ತಿಕೆಯಲ್ಲಿ ನಡೆಯಿಸುತ್ತಾರೆ. ಇದರ ಅಂತರಂಗ ಅರ್ಥವು ವ್ಯಕ್ತವಾಗಿ ತಿಳಿಯಲಿಲ್ಲ.

೩. ಮಂಡಯದ ಸ್ತ್ರೀಯರು ಸೀರೆಯನ್ನು ಎಡಗಡೆಗೆ ಹೊದ್ದುಕೊಳ್ಳುತ್ತಾರೆ. ತಿರುಮುಳಿಕ್ಕೈ ಶ್ರೀವೈಷ್ಣವ ಸ್ತ್ರೀಯರೂ ಹೆಬ್ಬಾರ್ ಶ್ರೀವೈಷ್ಣವ ಸ್ತ್ರೀಯರೂ ಹೀಗೆಯೇ ಮಾಡುತ್ತಾರೆ. ಇತರರು ಬಲಕ್ಕೇ ಹೊದ್ದುಕೊಳ್ಳುತ್ತಾರೆ.

೪. ಮಂಡಯದ ಸಮುದಾಯದಲ್ಲಿ ಯಾರು ಪರಮಪದಿಸಿದರೂ ಆ ವರ್ತಮಾನವನ್ನು ತಿಳಿದೊಡನೆಯೇ ಸಮುದಾಯದವರೆಲ್ಲರೂ ಸ್ನಾನಮಾಡುತ್ತಾರೆ. ಜ್ಞಾತಿಗಳು ಬಂಧುಗಳು ಎಂದಿಲ್ಲ.

೫. ನಮ್ಮವರು ಎಲ್ಲಿ ರಂಗವಲ್ಲಿಯನ್ನಿಕ್ಕಿದರೂ ಪ್ರಧಾನರಂಗವಲ್ಲಿಯ ಎರಡು ಕಡೆಗೂ ಎರಡು ಶುಭಪದ್ಮಗಳಂತಹ ಚಿಹ್ನೆಗಳನ್ನಿಡುವರು. ಈ ಪದ್ಧತಿಯು ಅನೇಕ ಪಂಗಡದವರಲ್ಲಿಲ್ಲ.

೬. ನಮ್ಮವರು ಊಟಮಾಡುವುದಕ್ಕೆ ಹಚ್ಚುವ ಎಲೆಗಳ ಹಿಂಭಾಗದಲ್ಲಿ ಮಧ್ಯದಲ್ಲಿ ಮುಖಕೆಳಗಾಗಿ 'ಬ್ರಾಹ್ಮಣ ಎಲೆ' ಎಂದು ಒಂದು ಎಲೆಯನ್ನು ಹಚ್ಚುತ್ತಾರೆ. ಬಹಳ ಹಿಂದಣ ಕಾಲಗಳಲ್ಲಿ ಇಂತಹ ಎಲೆಗಳು ಬೀದಿಯಲ್ಲಿ ಕಾಲಿಗೆ ತಗುಲಿದರೆ ಹಿಂಭಾಗದಲ್ಲಿ ನೋಡಿ 'ಇದು ಬ್ರಾಹ್ಮಣರ (ಭಾಗವತರ) ಎಲೆ' ಎಂದು ಅದಕ್ಕೆ ಮೈಲಿಗೆಯೇ ಇಲ್ಲವೆನ್ನುತ್ತಿದ್ದರಂತೆ.

೭. ನಮ್ಮಲ್ಲಿ ಸಂಕಲ್ಪಶ್ರಾದ್ಧವೇ ವಿಶೇಷವಾಗಿ ಅನುಷ್ಠಾನದಲ್ಲಿರುವುದು. ಎಲ್ಲೋ ನಾಲ್ಕಾರು ಮನೆಗಳವರು ಮಾತ್ರ ಪಾರ್ವಣ ಶ್ರಾದ್ಧವನ್ನು ಮಾಡುತ್ತಾರೆ.

೮. ಶ್ರೀಜಯಂತಿಯಲ್ಲಿ ದೇವರ ನಿವೇದನಕ್ಕಾಗಿ ಮೂವತ್ತೆರಡು ಬಗೆಯ ಪಣ್ಯಾರಗಳನ್ನು ಮಾಡುವ ಪದ್ಧತಿಯು ನಮ್ಮರಲ್ಲಿ ಇದ್ದಿತು. ಈಚೆಗೆ ಕೆಲವು ಪಣ್ಯಾರಗಳ ಹೆಸರುಗಳೇ ಮರೆತುಹೋಗುತ್ತಲಿವೆ.

೯. ಮಂಡಯದ ಶ್ರೀವೈಷ್ಣವ ಮಹಾಜನಗಳಲ್ಲಿ ದೇವರ ನಿವೇದನಕ್ಕೆ ಹುಳಿಯನ್ನವೂ (ಪುಳಿಯೊಹರೈ) ಉಳಂದೊಹರೈ ಮತ್ತು ಬಟ್ಟಿತ್ತೇಕೊಳಲು ಪಣ್ಯಾರವೂ ಪ್ರಸಿದ್ಧವಾಗಿದ್ದುವಂತೆ. ಈಗಲೂ ಹಾಗೆಯೇ ತೋರುತ್ತಿವೆ. ನಮ್ಮವರು ಮಾಡುವ ಚೊಕ್ಕಲಿಯೂ ಬಹು ಪ್ರಸಿದ್ಧವಾದುದು.

೧೦. ನಮ್ಮವರಲ್ಲಿ ಅಡುಗೆಯ ವೃತ್ತಿಯಿಂದಲೂ ಭಿಕ್ಷದ ವೃತ್ತಿಯಿಂದಲೂ ಜೀವನ ಮಾಡಕೂಡದೆಂಬ ಸಂಕೇತವಿತ್ತಂತೆ. ಆದರೆ ದೇವಸ್ಥಾನಗಳ ತಿರುಮಡಪ್ಪಳ್ಳಿ ಕೈಂಕರ್ಯವನ್ನು ಶ್ರೇಷ್ಠವಾದ ಕೈಂಕರ್ಯವೆಂದು ಭಾವಿ

ಸಿದ್ಧರು. ಉತ್ಕೃಷ್ಟವಾಗಿ ಅಡುಗೆಮಾಡುವ ಸಾಮರ್ಥ್ಯ ಉಳ್ಳವರು ಹಿಂದೆ ಕೆಲವರು ಇದ್ದಿದ್ದಾರೆ. ಇವರು ನಮ್ಮವರ ಮನೆಗಳಲ್ಲಿ ತದೀಯಾರಾಧನೆಗಳು ನಡೆದಾಗ ಆಹ್ವಾನಿಸಲ್ಪಟ್ಟರೆ ಕೈಂಕರ್ಯವೆಂದು ಭಾವಿಸಿ, ಅಡುಗೆಯನ್ನು ಮಾಡುತ್ತಿದ್ದರು. ಸಂಭಾವನೆಗಳನ್ನು ತೆಗೆದುಕೊಳ್ಳುತ್ತಿರಲಿಲ್ಲ.

## ಮೈಸೂರಿನಲ್ಲಿ ವೈರಮುಡಿ ಉತ್ಸವ: ನಮ್ಮವರ ಕೈಂಕರ್ಯ

ವೈರಮುಡಿ ಉತ್ಸವವು ಮೈಸೂರಿನಲ್ಲಿ ನವಾಗ್ರಹಾರಕ್ಕೆ (ಒಂಭತ್ತು ಮನೆಯ ಅಗ್ರಹಾರ) ಬಿಜಮಾಡಿಸುವ ಸುಯೋಗವನ್ನು ನಮ್ಮ ಸಮುದಾಯದವರಿಗೆ ಕಲ್ಪಿಸಿದವರು ಶ್ರೀ|| ಉ|| ಶಿಂಗ್ರಾಚಾರ್ಯಸ್ವಾಮಿಗಳು. ಈಚೆಗೆ ಈ ಅಗ್ರಹಾರವು ಮುನಿಸಿಪಾಲಿಟಿಯವರಿಂದ ವಹಿಸಿಕೊಳ್ಳಲ್ಪಟ್ಟಿತು. ಉತ್ಸವದ ಮರ್ಯಾದೆಯನ್ನು ನಡೆಯಿಸಿಕೊಂಡು ಬರುವುದಕ್ಕಾಗಿ ಬೇರೆ ಒಂದು ಸ್ಥಳವನ್ನು ಕೊಟ್ಟರು. ಈ ಸ್ಥಳವು ಕೆಲವು ಅನಾನುಕೂಲಗಳಿಂದ ಮಾರಲ್ಪಟ್ಟು ಬಂದ ಹಣವು ಮಂಡಯಂ ಶ್ರೀ ವೈಷ್ಣವರ ಸಭೆಯವರ ವಶಕ್ಕೆ ಬಂತು. ನಮ್ಮ ಸಮ್ಪ್ರದಾಯದವರದೇ ಆದ ಈಗ ಮೈಸೂರು ನಗರದ ರಮಾವಿಲಾಸ ಅಗ್ರಹಾರದಲ್ಲಿರುವ ಮಂಡಯಂ ವಿದ್ಯಾರ್ಥಿನಿಲಯದ ಕಟ್ಟಡಕ್ಕೆ ವೈರಮುಡಿಯನ್ನು ಬಿಜಮಾಡಿಸಿ ಮಂಟಪೋತ್ಸವವನ್ನು ನಡೆಯಿಸುವ ಏರ್ಪಾಡು ಅರಮನೆಯಿಂದ ಅಂಗೀಕೃತವಾಗಿ, ಉತ್ಸವವು ವಿಜೃಂಭಣೆಯಿಂದ ಜರುಗುತ್ತಾ ಹಿಂದಣ ಗೌರವವು ನಡೆದುಬರುತ್ತಿದೆ. ಈ ಉತ್ಸವವು ನಮ್ಮ ವಿದ್ಯಾರ್ಥಿನಿಲಯದಲ್ಲಿ ನಡೆದುಕೊಂಡು ಬರಲುಶಾಶ್ವತವಾಗಿ ಏರ್ಪಾಡಾಗಿದೆ.

## ನಮ್ಮವರ ದೇಶಯಾತ್ರೆಗಳು

ಸಾಮಾನ್ಯವಾಗಿ ನಮ್ಮವರು ಇಂಡಿಯಾದೇಶದ ಎಲ್ಲಾ ಭಾಗಗಳಲ್ಲಿಯೂ ಜೀವನೋಪಾಯಕ್ಕಾಗಿ ಹೋಗಿ ನೆಲೆಸಿದ್ದಾರೆ. ಸಿಲೋನಿನಲ್ಲಿಯೂ ವಾಸಮಾಡುತ್ತಿದ್ದಾರೆ. ವಿದ್ಯಾಭ್ಯಾಸಕ್ಕಾಗಿಯೂ, ದೇಶಾಟನಕ್ಕಾಗಿಯೂ ನಮ್ಮಲ್ಲಿ ಕೆಲವರು ಪಾಶ್ಚಾತ್ಯ ದೇಶಗಳಿಗೆ ಹೋಗಿ ಬಂದಿದ್ದಾರೆ. ಸ್ವಾಮಿ ಶ್ರೀವಾಸಾನಂದರವರ ಕುಮಾರರು ಶ್ರೀ ಎಂ. ಎ. ತಿರುಮಲೈಯ್ಯಂಗಾರ್ಯ್ಯರು ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗೆ ವ್ಯಾಸಂಗಮಾಡಲು ಪಾಶ್ಚಾತ್ಯ

ದೇಶಕ್ಕೆ ಹೋಗಿ ತೇರ್ಗಡೆಯನ್ನು ಹೊಂದಿ ಹಿಂತಿರುಗಿ ಇಂಡಿಯಾದೇಶದಲ್ಲಿ ಉನ್ನತಾಧಿಕಾರದಲ್ಲಿದ್ದಾರೆ. ಪ್ರಾಯಶಃ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ನಮ್ಮವರು ಕಾಲಿಟ್ಟಿದ್ದಾರೆನ್ನಬಹುದು. ಇವರಲ್ಲಿ ಪ್ರಾಮುಖ್ಯರಾದವರಿಬ್ಬರು ಮಹನೀಯರು ಶ್ರೀಮಾನ್ ಡಾಕ್ಟರ್ ಎಂ. ಎ. ಪಾರ್ಥಸಾರಥಿ ಅಯ್ಯಂಗಾರ್ಯರವರು (ಕಪ್ಪಲ್ ಡಾಕ್ಟರ್), ಮತ್ತು ಶ್ರೀಮಾನ್ ಗೋದಾವರೀ ಚಾಮಿಯವರು. ಗೋದಾವರೀ ಚಾಮಿಯವರು ರಾಜಕೀಯ ರಂಗದಲ್ಲಿ ಬ್ರಿಟಿಷರಿಗೆ ವಿರೋಧಿಗಳೆಂದು ದೇಶವನ್ನು ಬಿಡಬೇಕಾಯಿತು. ಬೇರೆ ದೇಶದಲ್ಲಿಯೂ ದೇಶಸೇವೆಯಲ್ಲಿಯೇ ನಿರತರಾಗಿದ್ದರು. ಈಗ ಅವರು ಬೊಂಬಾಯಿನಲ್ಲಿ ವಾಸವಾಗಿದ್ದಾರೆ. ಕಳೆದ ಮಹಾಯುದ್ಧದಲ್ಲಿ ರಂಗೂನ್ ನಗರವನ್ನು ಬ್ರಿಟಿಷ್ ಸೈನಿಕರು ಆಕ್ರಮಿಸಿಕೊಳ್ಳುವುದಕ್ಕೆ ಕೆಲವು ಗಂಟೆಗಳ ಕಾಲ ಮುಂಚಿನವರೆಗೂ ಶ್ರೀ ಆಮ್ಮಾಂಜಿ ಶಿಂಗ್ರಾಚಾರ್ಯರ ಕುಮಾರರು ಶ್ರೀಮಾನ್ ಎಂ. ಎ. ನರಸಿಂಹಾಚಾರ್ಯರು ರಂಗೂನ್ ನಗರದಲ್ಲಿಯೇ ಕೆಲಸದಲ್ಲಿದ್ದು ಅನಂತರ ಕಾಲುನಡಿಗೆಯಲ್ಲಿಯೇ ಘೋರ ಯಾತ್ರೆಯನ್ನು ಮಾಡಿಕೊಂಡು ದೈವಕೃಪೆಯಿಂದ ನಮ್ಮ ದೇಶವನ್ನು ಸೇರಿದರು.

ಈಚೆಗೆ ನಮ್ಮವರನೇಕರು ಪಾಶ್ಚಾತ್ಯ ದೇಶಗಳಲ್ಲಿ ವಿದ್ಯಾರ್ಜನೆಗಾಗಿಯೂ ಸಂಪದಭಿವೃದ್ಧಿಗಾಗಿಯೂ ಸಂಚಾರಮಾಡಿ ಕೀರ್ತಿ ಗಳಿಸಿದ್ದಾರೆ. ತಿಳಿದಮಟ್ಟಿಗೆ ಆ ಮಹನೀಯರ ಹೆಸರುಗಳನ್ನು ಇಲ್ಲಿ ಕೊಟ್ಟಿದೆ.

ಶ್ರೀಗಳಾದ:—(೧) ಡಾಕ್ಟರ್ ಎಂ. ಎ. ಸಂಪತ್ಕುಮಾರನ್

(೨) ಟಿಪ್ಪಣಿ ಶಿಂಗ್ರಾಚಾರ್ಯರು

(೩) ಎಂ. ಎ. ತಿರುನಾರಾಯಣಾಚಾರ್ಯರು

(೪) ಡಾಕ್ಟರ್ ಎಂ. ಒ. ಪಾರ್ಥಸಾರಥಿ ಅಯ್ಯಂಗಾರ್ಯರು

(೫) ,, ಎಂ. ಒ. ತಿರುನಾರಾಯಣನ್

(೬) ,, ಎಂ. ಜೆ. ನರಸಿಂಹನ್

(೭) ,, ಎಂ. ಜೆ. ತಿರುಮಲಾಚಾರ್

(೮) ,, ಎಂ. ಎ. ಪಾರ್ಥಸಾರಥಿ

(೯) ಡಾಕ್ಟರ್ ಎಂ. ಎ. ರಾಮಸ್ವಾಮಿ
(೧೦) ಎಂ. ಎ. ಶ್ರೀನಿವಾಸನ್‌ರವರೂ
(೧೧) & (೧೨) ಅವರ ಇಬ್ಬರು ಮಕ್ಕಳೂ
(೧೩) ಎಸ್. ಪಾರ್ಥಸಾರಥಿ
(೧೪) ಎಂ. ಎ. ಕೃಷ್ಣಸ್ವಾಮಿ
(೧೫) ಡಾಕ್ಟರ್ ಎಸ್. ಟಿ. ನರಸಿಂಹನ್
(೧೬) ಎಸ್. ಆನಂದಾಳ್ವಾರ್
(೧೭) ಎಸ್. ಟಿ. ಕೃಷ್ಣಮಾಚಾರ್ಯ
(೧೮) ಡಾಕ್ಟರ್ ಎಂ. ಎ. ನರಸಿಂಹಯ್ಯಂಗಾರ್ಯ
(೧೯) ಎಂ. ಎ. ಟಿ. ಅಯ್ಯಂಗಾರ್
(೨೦) ಎಂ. ಎ. ನರಸಿಂಹನ್
(೨೧) ಶ್ರೀಮತಿ ಎಂ. ಎ. ಸಿಂಗಮ್ಮಾಳ್

**ಮದ್ರಾಸ್ ತಿರುವಲ್ಲಿಕ್ಕೇಣಿಯಲ್ಲಿ ಇಂದಿಗೂ ನಮ್ಮವರ ಪ್ರಾಮುಖ್ಯತೆ**

ಕ್ರಿ. ಶ. ೧೮೬೮ ರಲ್ಲಿ ನಮ್ಮ ಹಿರಿಯರಿಂದ ಸ್ಥಾಪಿತವಾದ ಪ್ರಸಿದ್ಧ "ವೇದವೇದಾಂತವರ್ಧಿನೀ ಸಂಘ"; ಶ್ರೀಮದಿತ್ಯಾದಿ ಎಂ. ಎ. ಶಿಂಗಾಚಾರ್ಯರೇ ಆದಿಯಾಗಿ ಮಹನೀಯರಿಂದ ಸ್ಥಾಪಿತವಾದ ಪ್ರಖ್ಯಾತ "ಹಿಂದೂ ಹೈಸ್ಕೂಲ್"; ಕ್ರಿ. ಶ. ೧೮೯೬ ರಲ್ಲಿ ಶ್ರೀಮದಿತ್ಯಾದಿ ಮನ್ನಿ ತಿರುಮಲಾಚಾರ್ಯರಿಂದ ಸ್ಥಾಪಿತವಾದ ಸುಪ್ರಸಿದ್ಧ ಸಂಗೀತಸಭೆಯಾದ "ಶ್ರೀ ಪಾರ್ಥಸಾರಥಿಸ್ವಾಮಿ ಸಭೆ"; ಶ್ರೀಮದಿತ್ಯಾದಿ ಯೋಗಿ ಪಾರ್ಥಸಾಥಿ ಐಯ್ಯಂಗಾರ್ಯಸ್ವಾಮಿಗಳ ಪೂಜ್ಯ "ಸರಸ್ವತೀ ಭಂಡಾರ"; ಶ್ರೀಮದಿತ್ಯಾದಿ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ಯಸ್ವಾಮಿಗಳ ಗಣ್ಯ "ಧರ್ಮಕಾರ್ಯ ಸಂಸ್ಥೆ"; ಇವುಗಳಲ್ಲೆಲ್ಲಾ ನಮ್ಮ ಸಮುದಾಯದ ಮಹನೀಯರು ಇಂದಿಗೂ ಗಣ್ಯಸ್ಥಾನಗಳಲ್ಲಿದ್ದು ಸೇವೆಸಲ್ಲಿಸುತ್ತಿದ್ದಾರೆ.

**ನಮ್ಮವರಲ್ಲಿ ಒಂದು ಕೊರತೆ**

ನಮ್ಮವರಲ್ಲಿ ಪ್ರತಿಮನೆಯಲ್ಲಿಯೂ ಹಿಂದೆ ಉಪನಯನವಾಗಿ ಸಮಾಶ್ರಯಣವಾದವರಿಗೆ ತಿರುವಾರಾಧನಕ್ರಮವನ್ನು ಕಲಿಸುತ್ತಿದ್ದರು. ಪ್ರತಿ ಮನೆ

ಯಲ್ಲಿಯೂ ಪ್ರತಿದಿನವೂ ತಿರುವಾರಾಧನವು ನಡೆಯಲೇ ಬೇಕಾಗಿತ್ತು. ಗಂಡ ಸರು ತಿರುವಾರಾಧನವನ್ನು ಮಾಡಲು ಅನಾನುಕೂಲವಾದಾಗ ಆ ದಿನ ಹೆಂಗಸರು ಸಹ ಒಂದು ನಿಬಂಧನೆಯೊಡನೆ ದೇವರ ಕೈಂಕರ್ಯವನ್ನು ನಡೆಸಲೇ ಬೇಕಾಗಿತ್ತು. ಕೆಲವು ಶ್ರೀಮಂತರು ತಾವೇ ತಿರುವಾರಾಧನವನ್ನು ಮಾಡ ದಿದ್ದರೂ ಇತರ ವೈದಿಕರ ಮೂಲಕ ತಿರುವಾರಾಧನವನ್ನು ಮಾಡಿಸುತ್ತಿದ್ದರು.

ಈಗ ನಮ್ಮ ಯುವಕರು ಅನೇಕರಿಗೆ ತಿರುವಾರಾಧನಕ್ರಮವೇ ಅಭ್ಯಾಸ ದಲ್ಲಿಲ್ಲ. ಅನೇಕ ಹಿರಿಯರಿಗೂ ಅಭ್ಯಾಸವಿಲ್ಲ. ಇದು ಬಹಳ ಹಿರಿಯ ಕೊರತೆ. ಇದನ್ನು ಹೇಗಾದರೂ ಸರಿಪಡಿಸಿಕೊಳ್ಳಬೇಕೆಂದು ಸವಿನಯ ಪ್ರಾರ್ಥನೆ.

ನಮ್ಮ ಹಿರಿಯರಿಂದ ಪರಂಪರೆಯಾಗಿ ಅನುಷ್ಠಾನದಲ್ಲಿ ಬಂದ ತಿರು ವಾರಾಧನಕ್ರಮಗಳು ಎರಡು ಬಗೆಯಾಗಿವೆ. ಒಂದು ದೀರ್ಘವಾದದ್ದು. ಇನ್ನೊಂದು ಸಂಗ್ರಹವಾದದ್ದು. ಇವನ್ನು ಶ್ರೀಮದಿತ್ಯಾದಿ ವಿದ್ವಾನ್ ಹೊನ್ನಲ ಗೆರೆ ಐಯ್ಯನಯ್ಯಂಗಾರ್ ಸ್ವಾಮಿಗಳು ಅಚ್ಚು ಮಾಡಿಸಲು ಸಿದ್ಧಪಡಿಸಿದ್ದಾರೆ. ಮುದ್ರಣವಾಗಲು ಅನುಕೂಲವಾಗಿಲ್ಲ. ತಿರುವಾರಾಧನವೆಂಬ ಪವಿತ್ರಕಾರ್ಯ ವನ್ನು ಎಲ್ಲರೂ ಆಚಾರ್ಯಮುಖೇನ ಕಲಿತು ಪ್ರತಿದಿನವೂ ಅವರವರ ಮನೆ ಯಲ್ಲಿ ತಿರುವಾರಾಧನವು ತಪ್ಪದೆ ನಡೆಯುವಂತೆ ಆಗಬೇಕು. ಈ ಪವಿತ್ರ ಕಾರ್ಯವನ್ನು ಆಗಗೊಡಿಸಲು ನಮ್ಮ ಸ್ತ್ರೀ ಮಹನೀಯರ ಸಹಾಯವು ಆವಶ್ಯಕ ವಾಗಿದೆ.

## ಈಚೆಗೆ ನಮ್ಮ ಕೆಲವು ಮಹನೀಯರ ಅಸಾಧಾರಣ ಖ್ಯಾತಿಯ ಕೆಲವು ಉದಾಹರಣೆಗಳು

೧. ಶ್ರೀಮದಿತ್ಯಾದಿ ಮಹಾಮಹೋಪಾಧ್ಯಾಯ ಇತ್ಯಾದಿ ಬಿರುದಾಂ ಕಿತರಾದ **ಆರ್. ನರಸಿಂಹಾಚಾರ್ಯರವರ ಖ್ಯಾತಿ.**

ಕೆಲವು ವರ್ಷಗಳ ಹಿಂದೆ ಮೈಸೂರಿನ ಶ್ರೀಮದ್ಯುವರಾಜ ಶ್ರೀಕಂಠೀ ರವನರಸಿಂಹರಾಜ ಒಡೆಯರವರು ವಿದೇಶಕ್ಕೆ ಬಿಜಯಂಗೈದಿದ್ದಾಗ ಒಂದು ಮಹಾನಗರದ ಪ್ರಾಮುಖ್ಯವಾದ ಪುಸ್ತಕಭಂಡಾರವನ್ನು ಪರಾಂಬರಿಸು ತ್ತಿದ್ದರು. ಅಲ್ಲಿನ ಪ್ರಧಾನ ಅಧಿಕಾರಿಗೂ ಶ್ರೀಮದ್ಯುವರಾಜರಿಗೂ ಆದ

ಪರಿಚಯಸಂಭಾಷಣೆಯಲ್ಲಿ ಆ ಅಧಿಕಾರಿಯು ಶ್ರೀಮದ್ಯುವರಾಜರನ್ನು "ನಿಮ್ಮ ಮೈಸೂರು, ಆ ಪ್ರಸಿದ್ಧ ಆರ್ಕಿಯಾಲಜಿ ಪ್ರವೀಣರಾದ ಆರ್. ನರಸಿಂಹಾಚಾರ್ಯರ ಮೈಸೂರೋ?" ಎಂದು ಕೇಳಿದರು. ಈ ವಿಚಾರವನ್ನು ಶ್ರೀಮದ್ಯುವರಾಜರು ಮೈಸೂರು ರಾಜಧಾನಿಗೆ ಹಿಂದಿರುಗಿದಾಗ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರಲ್ಲಿ ಬಿನ್ನವಿಸಲಾಗಿ ಶ್ರೀಮನ್ಮಹಾರಾಜರವರು ಶ್ರೀ|| ಉ|| ಆರ್. ನರಸಿಂಹಾಚಾರ್ಯರವರನ್ನು ಅರಮನೆಗೆ ಬರಮಾಡಿಕೊಂಡು ಬಹಳವಾಗಿ ಸಂತೋಷ ವ್ಯಕ್ತಪಡಿಸಿ ವಿಶೇಷವಾಗಿ ಗೌರವಿಸಿದರು.

೨. ಶ್ರೀಮದಿತ್ಯಾದಿ ಪ್ರೊಫೆಸರ್ ಎಂ. ರಂಗಾಚಾರ್ಯರವರ **ಖ್ಯಾತಿ.**

ಒಬ್ಬ ಸ್ಮಾರ್ತ ಬ್ರಾಹ್ಮಣರು, ಮದ್ರಾಸ್ ಪ್ರಾಂತ್ಯದ ಉನ್ನತಾಧಿಕಾರಿಗಳು ಮೈಸೂರಿಗೆ ರೈಲಿನಲ್ಲಿ ಪ್ರಯಾಣಮಾಡುತ್ತಿದ್ದರು. ಚೆನ್ನಪಟ್ಟಣದ ರೈಲ್ವೆ ಸ್ಟೇಷನ್ನಿನಲ್ಲಿ ರೈಲು ನಿಂತಿತು. "ಮದ್ರಾಸಿಗೆ ಚೆನ್ನಪಟ್ಟಣವೆನ್ನುತ್ತಾರೆ, ಮೈಸೂರಿನಲ್ಲಿಯೂ ಒಂದು ಚೆನ್ನಪಟ್ಟಣವಿದೆಯೋ?" ಎಂದು ಜತೆಯ ಪ್ರಯಾಣಿಕರನ್ನು ಕೇಳಿದರು. "ಅದು ಮದ್ರಾಸ್ ಚೆನ್ನಪಟ್ಟಣ, ಇದು ಮಳೂರು ಚೆನ್ನಪಟ್ಟಣ" ಎಂದು ಉತ್ತರ ಬಂದಿತು. ಆಗ ಅಯ್ಯನವರು ಚೆನ್ನಪಟ್ಣದ ರೈಲ್ವೆ ಸ್ಟೇಷನ್ನಿಗೆ ನಮಸ್ಕರಿಸಿ "ನಮ್ಮ ಗುರುಗಳು ಪ್ರೊ|| ಎಂ. ರಂಗಾಚಾರ್ಯರ **ಮಳೂರು** ಚೆನ್ನಪಟ್ಟಣ" ಎಂದು ಹೇಳಿ ತಮ್ಮ ಜತೆಯ ಪ್ರಯಾಣಿಕರಿಗೆ ಶ್ರೀಮದಿತ್ಯಾದಿ ರಂಗಾಚಾರ್ಯರ ಪ್ರಭಾವವನ್ನು ಹೇಳುತ್ತಾ ಪ್ರಯಾಣ ಬೆಳಸಿದರು.

೩. ಶ್ರೀಮತ್ಯಾದಿ ಎಂ. ಸಿ. ಆಳಸಿಂಗ ಪೆರುಮಾಳರವರ **ಖ್ಯಾತಿ.**

ಕ್ರಿ. ಶ. ೧೮೯೧-೧೮೯೨ ರಲ್ಲಿ ಶ್ರೀ ಸ್ವಾಮಿ ವಿವೇಕಾನಂದರು ಮದ್ರಾಸಿಗೆ ಮೊಟ್ಟಮೊದಲು ಆಗಮಿಸಿದರು. ಆಗ ಶ್ರೀ|| ಉ|| ಆಳಶಿಂಗಪೆರುಮಾಳ್‌ರವರಿಗೂ **ಶ್ರೀ ಸ್ವಾಮಿ ವಿವೇಕಾನಂದರಿಗೂ** ಸ್ನೇಹವಾದದ್ದು. ಕ್ರಿ. ಶ. ೧೮೯೩ ರಲ್ಲಿ ಚಿಕಾಗೋ ನಗರದಲ್ಲಿ "Parliament of Religions" ಎಂಬ

ಪ್ರಪಂಚದ ಮಹಾಸಭೆಯು ನಡೆಯಲು ಏರ್ಪಾಡು ನಡೆಯುತ್ತಿತ್ತು. ಹಿಂದೂ ಸ್ಥಾನದ ವೇದಾಂತ ಮತತತ್ವಸಾರವನ್ನು ಪ್ರಪಂಚಕ್ಕೆ ಉಪದೇಶಿಸುವ ಸಕಾಲವಿದೆಂದು ಶ್ರೀಮದಿತ್ಯಾದಿಗಳಾದ ಯೋಗೀ ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರೂ, ಪ್ರೊ|| ಎಂ. ರಂಗಾಚಾರ್ಯರವರೂ, ಅಳ ಶಿಂಗಪೆರುಮಾಳ್‌ರವರೂ ಯೋಚಿಸಿದರು. ಶ್ರೀ|| ಅಳಶಿಂಗಪೆರುಮಾಳ್ ರವರು ಶ್ರೀ ಸ್ವಾಮಿ ವಿವೇಕಾನಂದರವರನ್ನು ಚಿಕಾಗೋ ನಗರಕ್ಕೆ ಹೋಗಲು ಪ್ರೇರೇಪಿಸಿ ಅವರಿಗೆ ಬೇಕಾದ ದ್ರವ್ಯವನ್ನೆಲ್ಲಾ ಸಂಪಾದಿಸಿ ಶ್ರೀ ಸ್ವಾಮಿ ವಿವೇಕಾನಂದರನ್ನು ಬೀಳ್ಕೊಟ್ಟರು. ಶ್ರೀ ಸ್ವಾಮಿ ವಿವೇಕಾನಂದರು 'Parliament of Religions' ಮಹಾಸಭೆಯಲ್ಲಿಯೂ ಅಲ್ಲಿಂದ ಮುಂದೆ ಪಾಶ್ಚಾತ್ಯದೇಶಗಳಲ್ಲಿಯೂ ಪ್ರಚಾರಮಾಡಿದ ಹಿಂದೂಮತತತ್ವ ಪ್ರಭೆಯ ವಿಚಾರವು ಲೋಕವಿಖ್ಯಾತವಾಗಿದೆ. ಶ್ರೀ|| ಅಳಶಿಂಗಪೆರುಮಾಳರವರನ್ನು ಸ್ವಾಮಿ ವಿವೇಕಾನಂದರು '**ನನ್ನ ಅಳಶಿಂಗ**' ಎಂದೇ ಸಂಬೋಧಿಸು ತ್ತಿದ್ದರು. ಈಗ ಪ್ರಪಂಚದ ನಾನಾ ಮೂಲೆಗಳಲ್ಲಿಯೂ ಇರುವ ಶ್ರೀ ರಾಮ ಕೃಷ್ಣಪರಮಹಂಸರವರ ಆಶ್ರಮಗಳಲ್ಲಿರುವ ಸನ್ಯಾಸಿಗಳೂ ಶಿಷ್ಯರೂ 'ಅಳ ಶಿಂಗ್' ಎಂಬ ಹೆಸರಿಗೆ ತುಂಬಾ ಮರ್ಯಾದೆಯನ್ನು ಸಲ್ಲಿಸುವರು.

### ೪. ಮಂಡಯದ "ಪ್ರ.ಭ.ಶ್ರೀವತ್ಸ ಶಿಂ" ಇವರ ಖ್ಯಾತಿ.

ಕರ್ಣಾಟಕ ರತ್ನ ಸಿಂಹಾಸನಾಧೀಶ್ವರನಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಶ್ವರ ಮಹಾಪ್ರಭುಗಳವರ ಮುತ್ತಾತಂದಿರಾದ ಶ್ರೀ ಕೃಷ್ಣ ರಾಜಮಹಾರಾಜ ಕಂಠೀರವರು ಶಕವರುಷ ೧೭೭೪ ಸಂದ ಪರೀಧಾವಿ ಸಂವತ್ಸರದಲ್ಲಿ (ಕ್ರಿ.ಶ ೧೮೫೨) "**ಪೂರ್ಣತಾರಾಕಲ್ಪತರು ಚಕ್ರ**"ವೆಂಬ ಚತುರಂಗದ ಅಶ್ವಗತಿರೀತ್ಯಾ ಚಮತ್ಕಾರವಾದ ಚೌಕ ಬಂಧವೊಂದನ್ನು ರಚಿಸಿದರು. (Magic square of the chess board knights' march) ಗಣಿತಶಾಸ್ತ್ರದ ಪ್ರಪಂಚವನ್ನೇ ಆಗಿನಕಾಲಕ್ಕೂ ಮತ್ತು ಈಗಲೂ ವಿಸ್ಮಯ ಪಡಿಸುವಂಥ ಅಮೋಘವಾದ ಚಕ್ರವು ಇದು ಎಂದು ಈ ಲೇಖಕನ ಸ್ನೇಹಿತ ರಾದ ಗಣಿತಶಾಸ್ತ್ರಪ್ರವೀಣರು ಹೇಳುತ್ತಾರೆ.

ಈ ಚಕ್ರದ ಅಸಲು ಪ್ರತಿ ಒಂದು (original) ಶ್ರೀಮನ್ಮಹಾರಾಜ ಶ್ರೀ ಕೃಷ್ಣಭೂಪತಿಗಳವರ ವ್ಯಾಘ್ರಮುಖ ಮುದ್ರೆಯೊಡನೆ ಈ ಲೇಖಕ ನಲ್ಲಿದೆ. ಅಸಲಿನ ನಕಲನ್ನು ಮುಂದೆ ಬರೆದಿವೆ. ಇವರ ಒಂದು ಪ್ರತಿಯು ಶ್ರೀಮದಿತ್ಯಾದಿಗಳಾದ ಪಂಡಿತರತ್ನಂ, ವಿದ್ಯಾನಿಧಿ ಜಯರಾಮ ವೆಂಕಟಾ ಚಾರ್ಯ ಸ್ವಾಮಿಗಳವರ ಕರಡಿನಲ್ಲಿದೆ. ಇವರಡಿಯಲ್ಲಿ **"ಮಂಡಯದ ಪ್ರ–ಭ–ಶ್ರೀವತ್ಸ ಶಿಂ|| ಗುಣಿಸಿದ್ದು"** ಎಂದುಬರೆದಿದೆ. ಈ ಚಕ್ರದ ವಿವರಣೆಯು ಲೇಖನವನ್ನು ಕನ್ನಡದಲ್ಲಿ ಈ ಗ್ರಂಥಕರ್ತನು ಬರೆದಿದ್ದಾನೆ. ಮುದ್ರಣ ವಾಗಿಲ್ಲ.

"ಮಂಡಯದ **ಪ್ರ–ಭ–ಶ್ರೀವತ್ಸ ಶಿಂ**" ಯಾರೆಂಬುದನ್ನು ನಿರ್ಧರ ಮಾಡಲಾಗಿಲ್ಲ. ಬಹುಶಃ ಮಂಡಯದ ಪ್ರತಿವಾದಿ ಭಯಂಕರ ಶ್ರೀವತ್ಸ ಗೋತ್ರದ ಶಿಂಗ್ರಾಚಾರ್ಯರೆಂಬುವರೋ, ಶಿಂಗ್ರೈಯ್ಯಂಗಾರ್ಯರೆಂಬುವರೋ ಇರಬಹುದೇ? ಈ ಚಕ್ರವು ರಚಿತವಾದಕಾಲವಾದ ಕ್ರಿ. ಶ. ೧೮೩೦ ರಲ್ಲಿ ಪ್ರತಿವಾದಿ ಭಯಂಕರ ಶ್ರೀವತ್ಸಗೋತ್ರದ ವಂಶವೃಕ್ಷದಲ್ಲಿ ಈ ಹೆಸರಿನ ಐದು ಮಹನೀಯರಿರುವರು.

ಸುಮಾರು ಕ್ರಿ ಶ. ೧೮೪೯ ರಲ್ಲಿ **ವೆ಼ಸಿಲ್ವೈಡಿಸ್** ಎಂಬುವನು ಈ ನಮೂನೆಯ ಚಕ್ರ ಒಂದನ್ನು ತಯಾರಿಸಿರುವನಂತೆ. ಆದರೆ ಅದು ನಮ್ಮ ಚಕ್ರದಷ್ಟು ಒಪ್ಪಾಗಿಯೂ ಚಮತ್ಕಾರವಾಗಿಯೂ ಇಲ್ಲವಂತೆ. ಸುಮಾರು ಒಂದು ಶತಮಾನದಲ್ಲಿ, ಇನ್ನೂ ಇಂಥ ಚಕ್ರವನ್ನು ಯಾರೂ ತಯಾರಿಸಿಲ್ಲ ವಂತೆ.

ಈ ಚಕ್ರವು ಶಾಶ್ವತವಾಗಿ ಬೆಳಗುತ್ತಿರಲೆಂದು ಮುಂದೆ ನಕಲು ಮಾಡಿದೆ.

## ಶ್ರೀ|| ಉ|| ಆಳ್ವಾರ್ ಸ್ವಾಮಿಗಳವರ ಖ್ಯಾತಿ

ಗ್ರಂಥಕರ್ತನ ಅಕ್ಕ ಸೌ|| ಶಿಂಗಮ್ಮನೆಂಬುವವರನ್ನು ಶ್ರೀಮದಿತ್ಯಾದಿ ಆಳ್ವಾರ್ ಸ್ವಾಮಿಗಳವರ ಜ್ಯೇಷ್ಠಕುಮಾರರು ಶ್ರೀ|| ಉ|| ಲಕ್ಷ್ಮೀತಾತಾ

ಚಾರ್ಯ ಸ್ವಾಮಿಗಳವರಿಗೆ ಕೊಟ್ಟು ವಿವಾಹಮಹೋತ್ಸವವು ನಡೆದ ಸಮಯ ವಲ್ಲಿ, ಆಹ್ವಾನಿತರಾಗಿ ಆಂಧ್ರದೇಶದಿಂದ ಇಬ್ಬರು ವಿದ್ಯಾವಂತರು ಶ್ರೀಮಂತರು ಬಂದಿದ್ದರು. ನೆರೆದಿದ್ದ ತುಂಬಿದ ಗೋಷ್ಠಿಯಲ್ಲಿ ಇವರಿಬ್ಬರೂ ಶ್ರೀ|| ಉ|| ಅಳ್ವಾರ್‌ಸ್ವಾಮಿಗಳವರನ್ನು "ದಶವಿದ್ಯಾ ಚಕ್ರವರ್ತಿ"ಗಳೆಂದು ಸಂಬೋಧಿಸಿ ಅವರಿಗೆ ಹತ್ತು ತಟ್ಟೆಗಳಲ್ಲಿ ನಾಣ್ಯಗಳು, ವಸ್ತ್ರಗಳು, ಫಲ, ಪುಷ್ಪಗಳನ್ನಿಟ್ಟು ಒಪ್ಪಿಸಿದರು. ತಟ್ಟೆಗಳನ್ನು ಒಂದೊಂದಾಗಿ ಒಪ್ಪಿಸುವಾಗ ಶ್ರೀ|| ಉ|| ಸ್ವಾಮಿಗಳವರ ಒಂದೊಂದು ವಿದ್ಯೆಯ ವಿಶೇಷವನ್ನೂ ಹೊಗಳಿ ಹೊಗಳಿ ಒಪ್ಪಿಸಿದರಂತೆ.

## 'ಪೂರ್ಣ ತಾರಾಕಲ್ಪತರು ಚಕ್ರ'ದ ನಕಲು

| | | |
|---|---|---|
| ಇಲ್ಲಿ ಅಮೌಲ್ಯವಾದ ಚಿತ್ರಕಲೆಯ ಪ್ರದರ್ಶನವಿದೆ. | ಇಲ್ಲಿ ಶ್ರೀಕೃಷ್ಣ ಭೂಪತಿಯವರ ವ್ಯಾಘ್ರ ಮುಖದ ಮೊಹರು ಇದೆ. | ಇಲ್ಲಿ ಅಮೌಲ್ಯವಾದ ಚಿತ್ರಕಲೆಯ ಪ್ರದರ್ಶನವಿದೆ. |

ಶ್ರೀ ಕೃಷ್ಣರಾಜ ಮಹಾರಾಜಕಂಠೀರವರಿಂದ ಶಕವರುಷ ೧೭೭೪ ಸಂವ ಪರೀಧಾವಿ ಸಂ|| ಶ್ರಾವಣ ಶುದ್ಧ ೧೫ ಸ್ಥಿರವಾರದಲ್ಲು ವಿರಚಿತಮಾದ ಪೂರ್ಣ ತಾರಾಕಲ್ಪತರು ಚಕ್ರ||

ಈ ಪೂರ್ಣ ತಾರಾಕಲ್ಪತರುವೆಂಬ ೬೪ ಮನೆ ಚತುರಂಗ ಚಕ್ರದಲ್ಲಿ ಅಶ್ವಗತಿ ರೀತ್ಯಾ ದಂಡಪಾರ್ಶ್ವ ಪಂಙ್ತ್ಯ ಗಳಲ್ಲಿಯೂ ಮತ್ತೂ ಅಲ್ಲಲ್ಲಿ ಸರಿಸಯಾಗಿ ಎಂಟೆಂಟು ಮನೆಗಳಲ್ಲಿ ಸಹ ೧೧೬ ಪ್ರಕಾರವಾಗಿ ೨೬೦ ತೆರೀಜು

| | | | | | | | |
|---|---|---|---|---|---|---|---|
| * ೧೧ | ೪೬ | ೨೧ | * ೫೨ | * ೧೩ | ೪೪ | ೧೯ | * ೫೪ |
| ೨೨ | * ೪೯ | * ೧೨ | ೪೫ | ೨೦ | * ೫೩ | * ೧೬ | ೪೩ |
| ೪೭ | * ೧೦ | * ೫೧ | ೨೪ | ೪೧ | * ೧೪ | * ೫೫ | ೧೮ |
| * ೫೦ | ೨೩ | ೪೮ | * ೯ | * ೫೬ | ೧೭ | ೪೨ | * ೧೫ |
| * ೩೫ | ೮ | ೨೫ | * ೬೪ | * ೨೯ | ೪೦ | ೫೭ | * ೨ |
| ೨೬ | * ೬೩ | * ೩೬ | ೫ | ೬೦ | * ೧ | * ೩೦ | ೩೯ |
| ೭ | * ೩೪ | * ೬೧ | ೨೮ | ೩೭ | * ೩೨ | * ೩ | ೫೮ |
| * ೬೨ | ೨೭ | ೬ | * ೩೩ | * ೪ | ೫೯ | ೩೮ | * ೩೧ |

ಬರುವಂತೆ ರಚಿಸಿ ಇದೆ|| ಇನ್ನೂ ಇದೆ ತೆರೀಜು ಬರುವಂತೆ ಬುದ್ಧಿವಂತರು ಮಾಡುವುದಕ್ಕೆ ಅವಕಾಶವಾಗುವಂತೆ ಏಕಾಶ್ವಗತಿ ನಡೆಸಿ ಇದೆ|| ಮತ್ತೂ ನಕ್ಷತ್ರದ ಗುರುತುಳ್ಳ ಮನೆಗಳಲ್ಲಿಯೂ ಸಾದಾ ಮನೆಗಳಲ್ಲಿಯೂ ಚಮತ್ಕಾರವಾಗಿ ೪ ಮನೆಲೆಖ್ಖ ಸೇರಿಸಿದರೆ ೧೩೦|| ೮ ಮನೆಗೆ ೨೬೦|| ೧೬ ಮನೆಗೆ ೫೨೦|| ೩೨ ಮನೆಗೆ ೧೦೪೦|| ೬೪ ಮನೆಗೆ ೨೦೮೦ ತೆರಜು ಬರುವಂತೆ ರಚಿಸಿ ಇದೆ;—||

ಈ ಚಕ್ರ ಶಿಲಾಯತಂತ್ರದಿಂದ ಅಚ್ಚು ಹಾಕಿದ್ದು ||—||

## ಹಿಂದಣ ಕ್ರಯಪತ್ರದ ಒಕ್ಕಣೆ

ನಮ್ಮವರು ಹಿಂದೆ ತಾಳಪತ್ರದ ಓಲೆಯಲ್ಲಿ ಬರೆದಿಟ್ಟ ಒಂದು ಕ್ರಯ ಪತ್ರದ ನಕಲು ದೊರೆತಿರುವುದು. ಅದನ್ನು ಮಾದರಿಗಾಗಿ ಬರೆದಿದೆ:—

"ಶುಭಮಸ್ತು. ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ ೧೬೫೫ (ಕ್ರಿ.ಶ. ೧೭೩೩) ಸನ್ನವರ್ತಮಾನವಾದ ಪ್ರಮೋದೀಚನಾಮ ಸಂವತ್ಸರದ ಅಧಿಕಾಷಾಢ ಬ. ೫. ಲ್ಲು ಶ್ರೀಮದ್ರಾಜಾಧಿರಾಜ ಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಶ್ರೀ ಚಾಮರಾಜೊಡೆಯರಯ್ಯ ನವರು ಶ್ರೀರಂಗಪಟ್ಟಣದಲ್ಲು ರತ್ನಸಿಂಹಾಸನಾರೂಢರಾಗಿ ಸುಖದಿಂ ಪೃಥ್ವೀ ಸಾಮ್ರಾಜ್ಯಂಗೈಯುತ್ತಿರಲು ಭಾರದ್ವಾಜ ಗೋತ್ರದ ಆಪಸ್ತಂಭ ಸೂತ್ರದ ಯಜುಶ್ಶಾಖೆಯ ಶ್ರೀರಂಗಪಟ್ಟಣದ ತಿರುಮಲೆ ಅನಂದಾಳ್ವಾರ ಮಕ್ಕಿವ ಆನಂದಾಳ್ವಾರ ಪೌತ್ರ ವೆಂಕಟಾಚಾರ್ಯೈಯ್ಯನವರ ಪುತ್ರರಾದ ತಿರುಮಲೆಂ ಗಾರು ಭಾರದ್ವಾಜ ಗೋತ್ರದ ಆಪಸ್ತಂಭ ಸೂತ್ರ ಯಜುಶ್ಶಾಖೆಯ ಶ್ರೀರಂಗ ಪಟ್ಟಣದ ತಿರುಮಲೆ ಅನಂದಾಳ್ವಾರ ಮಂಡೆದ ತಿಮ್ಮೆಂಗಾರ್ಯೈಯ್ಯನವರ ಪೌತ್ರರಾದ ಶ್ರೀನಿವಾಸೆಂಗಾರ್ಯೈಯ್ಯನವರ ಪುತ್ರರಾದ ತಿಮ್ಮೆಂಗಾರ್ಯೈಯ್ಯನವ ರಿಗೆ ಕೊಟ್ಟ ಗದ್ದೆ ಕ್ರಯದಾನಸಾಧನಕ್ರಮವೆಂತೆಂದರೆ: ಮಂಡೆದಲ್ಲಿ ಬಡಗಣ ತೂಬಿನ ಕೆಳಗೆ ನನ್ನ ಅಂಶಕ್ಕೆ ಸಲುವ ಶೀಗೆಮೇಡು ಗದ್ದೆ ಮೂರು ಕೊಳಗ ಗದ್ದೆಯನ್ನು ನಾನು ನಿಮಗೆ ಕ್ರಯದಾನವಾಗಿ ಕೊಟ್ಟೆನಾಗಿ ಈ ಗದ್ದೆಗೆ ಕ್ರಯ ತತ್ಕಾಲೋಚಿತ ಮಧ್ಯಸ್ಥಪರಿಕಲ್ಪಿತ ಉಭಯವಾದಿ ಸಂಪ್ರತಿಪನ್ನ ಕ್ರಯ ಲಕ್ಷಣ ಲಕ್ಷಿತ ಕ್ರಯದ್ರವ್ಯಕಾಲ ಪರಿವರ್ತನೆಗೆ ಸಲುವ ನಾಣ್ಯಕಂಠೀರವ ಗುಳಿಗೆ ೫೦ ವರಹ, ಅಕ್ಷರದಲ್ಲೂ ಇದೆ ಕಣ್ಠೀರವ ಗುಳಿಗೆ ಐವತ್ತು ವರಹದ ಈ ಐವತ್ತು ವರಹವೂ ನಿಮ್ಮಿಂದ ಸಂದವಿವರ ಈ ಸ್ವಾಸ್ತ್ಯಗಳಮೇಗಳ ಪೂರ್ವಾದಿಕಾಲ ಯೆಂಬೆರುಮಾನಾರ ಗೋವಿಂದಾಚಾರ್ಯರಿಗೆ ರೆದ್ದಿದ್ದು ಕಂಠೀ ರವ ಗುಳಿಗೆ ೪೫ ವರಹ ಕೈಯಲ್ಲಿ ಸಂದದು, ಕಂಠೀರವ ಗುಳಿಗೆ ೫ ವರಹ, ಉಭಯಂ ಕಂಠೀರವ ಗುಳಿಗೆ ೫೦ ವರಹವೂ ಸಾಕಲ್ಯವಾಗಿ ಸದ್ಯಃ ಪರಿಚ್ಛೆದ ವಾಗಿ ಕಾಸು ವೀಸ ಉಳಿಯದೆ ದಿವಾನೊಟದಲ್ಲಿ ನನಗೆ ಸಂದು ಇದೆ. ಕ್ರಯ

ನ್ನೆಸವಾಗಿ ಸಲುವುದು ಯಿಲ್ಲಿನ್ಸ್ದಮುಣ್ಡಿ ಶೀಗೆಮೇಡು ಆರು ಕೊಳಗ ಗದ್ದೆ ಚತು ಸ್ಸೀಮೆ ಒಳಗುಳ್ಳ ನಿಧ್ಯಾದ್ಯಷ್ಟಭೋಗತೇಜಸ್ಸ್ವಾಮ್ಯಗಳು ನಿವಗೆಸಲುವುದು. ಯಾ ಗದ್ದೆಯನ್ನು ನೀವು ಮಾಡುವ ಆಧಿಕ್ರಯಧಾನ ಪರಿವರ್ತನೆಗಳಿಗೆ ಯೋಗ್ಯವಾಗಿ ಸಲುವುದು. ಯಾ ಗದ್ದೆಯನ್ನು ನೀವು ನಿಮ್ಮ ಪುತ್ರ ಪೌತ್ರ ಪಾರಂಪರೆಯಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಸುಖದಿಂ ಅನುಭವಿಸಿ ಕೊಣ್ಡು ಬರುವಿರಿಯೆನ್ನು ಭಾರದ್ವಾಜ ಗೋತ್ರದ ಆಪಸ್ತಂಭ ಸೂತ್ರದ ಯಜುಶ್ಯಾಖೆಯ ಶ್ರೀರಂಗಪಟ್ಟಣದ ತಿರುಮಲೆ ಆನಂದಾಳ್ವಾರ ತಿಮ್ಮಿಂಗಾ ರ್‍ಯ್ಯನವರ ಪೌತ್ರರಾದ ಶ್ರೀನಿವಾಸೆಂಗಾರ್‍ಯ್ಯನವರ ಪುತ್ರರಾದ ತಿಮ್ಮಿಂಗಾ ರ್‍ಯ್ಯನವರಿಗೆ ಭಾರದ್ವಾಜ ಗೋತ್ರದ ಆಪಸ್ತಂಭ ಸೂತ್ರದ ಯಜುಶ್ಯಾಖೆಯ ಶ್ರೀರಂಗಪಟ್ಟಣದ ತಿರುಮಲೆ ಅನಂದಾಳ್ವಾರ ಪೌತ್ರರಾದ ವೆಂಕಟಾಚಾ ರ್‍ಯ್ಯನವರ ಪುತ್ರರಾದ ತಿರುಮಲೆಂಗಾರು ನನ್ನ ಸ್ತ್ರೀ ಪುತ್ರ ಜ್ಞಾತಿ ದಾಯಾದಿ ಸಾವನ್ತಾದ್ಯನುಮತಿ ಪುರಸ್ಸರವಾಗಿ ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ಕೊಟ್ಟ ಗದ್ದೆ ಕ್ರಯ ದಾನಸಾಧನ. ಇನ್ತಪ್ಪದಕ್ಕೆ ಸಾಕ್ಷಿ ಗಳು: ಶಿಂಗಶಿಂಗಾರ್‍ಯ್ಯನವರ ಮಕ್ಕಳು ತಿರುಮಲಾಚಾರ್‍ಯ್ಯನವರು, ಅಪ್ಪಲಾಚಾರ್‍ಯ್ರೈಯ್ಯನವರ ಮಕ್ಕಳು ಅಪ್ಪಲಾಚಾರ್‍ಯರು, ಕೃಷ್ಣೈಯ್ಯನವರ ಮಕ್ಕಳು ರಂಗಯ್ಯನವರು, ಮೂಲಕರ್ತುವಿನ ಒಪ್ಪಿತ ಶ್ರೀನಿವಾಸಃ ಸಾಕ್ಷಿಗಳ ಬರಹ ಶ್ರೀನಿವಾಸಸಾಕ್ಷಿ ಶ್ರೀ ವರದರಾಜಸ್ಸಾಕ್ಷಿ ಶ್ರೀ ರಂಗನಾಥಸಾಕ್ಷಿ ಈ ಮರ್‍ಯಾದೆಗೆ ತಿರುಮಲೆಂಗಾರಯ್ಯನವರ ಮಕ್ಕಳು ಅಪ್ಪಾಚ್ಚಾರ್‍ಯ್ಯನ ಬರೆಹ.

## ಪ್ರಕರಣ ೧೦.

### ಮಂಡಯಂ ಶ್ರೀವೈಷ್ಣವರ ಮಹಾ ಸಭೆಗಳು

ಇದು ಈಚಿನ ವಿಷಯಗಳ ಸಂಕ್ಷಿಪ್ತ ವರದಿಯಾಗಿದೆ. ವಿದ್ಯಾರ್ಜನೆ ಗಾಗಿಯೂ, ಸಮುದಾಯದವರು ಒಂದುಗೂಡಿ ತಮ್ಮ ಏಳಿಗೆಗಾಗಿ ಯತ್ನಿಸು ವುದಕ್ಕೂ ವ್ಯಾಯಾಮದಲ್ಲಿ ಆಸಕ್ತಿ ವಿಶೇಷವಾಗುವುದಕ್ಕೂ ಇಪ್ಪತ್ತನೆಯ ಶತಮಾನದಲ್ಲಿ ಅಲ್ಲಲ್ಲಿ ನಮ್ಮವರ ಸಣ್ಣ ಸಣ್ಣ ಸಂಘಗಳೇರ್ಪಟ್ಟುವು. ಮುಖ್ಯ

ವಾಗಿ ಮೈಸೂರು, ಬೆಂಗಳೂರು, ಮದ್ರಾಸುಗಳಲ್ಲಿ. ಒಟ್ಟು ಸಮುದಾಯದ ಮಹಾ ಸಭೆಯು ಕ್ರಿ. ಶ. ೧೯೧೫ ರವರೆಗೆ ರೂಪುಗೊಳ್ಳಲಿಲ್ಲ.

ಶ್ರೀ|| ಉ|| ದಿವಾನ್ ಬಹದ್ದೂರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರು ಉದಾರವಾಗಿ ಒಂದು ಲಕ್ಷ ರೂಪಾಯಿಗಳನ್ನು ಧರ್ಮಕ್ಕಾಗಿ ಕೊಟ್ಟು ಇದಕ್ಕಾಗಿ ೧೯೧೩ನೇ ಜುಲೈ ೧೪ರಲ್ಲೂ ಒಂದು ದಾನ ಶಾಸನವನ್ನು ರಚಿಸಿದರು. ಈ ಅನ್ಯಾದೃಶ ಧರ್ಮಕ್ಕಾಗಿ ಆ ಮಹನೀಯರನ್ನು ಅಭಿನಂದಿಸಲು ಮಲ್ಲೇಶ್ವರದ ಶ್ರೀ ವೇಣುಗೋಪಾಲಕೃಷ್ಣ ಸ್ವಾಮಿಯವರ ಸನ್ನಿಧಿಯಲ್ಲಿ ನಮ್ಮವರ ಒಂದು ಸಭೆಯು ೧೯೧೩ರಲ್ಲಿ ಸೇರಿತ್ತು. ಆಗ ನಮ್ಮ ಸಮುದಾಯದ ಮೇಲ್ಮೆಗಾಗಿ ಪ್ರತಿ ಸಂವತ್ಸರವೂ ಒಂದು ಮಹಾ ಸಭೆಯನ್ನೇರ್ಪಡಿಸಬೇಕೆಂದು ಸಲಹೆಯು ಉದಿಸಿತು.

ಶ್ರೀ|| ಉ|| ದಿವಾನ್ ಬಹದ್ದೂರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ೧೫-೩-೧೯೧೫ರಲ್ಲಿ ತಿರುವಲ್ಲಿಕ್ಕೇಣಿಯ ಹಿಂದೂ ಪ್ರೈಮರಿ ಸ್ಕೂಲಿನಲ್ಲಿ ಮದ್ರಾಸಿನ ನಮ್ಮ ಸಮುದಾಯದ ಮಹಾಜನರ ಸಭೆ ಸೇರಿ, ನಮ್ಮವರ ಒಂದು ಮಹಾ ಸಭೆಯ ಆವಶ್ಯಕತೆಯನ್ನು ತೀರ್ಮಾನಿಸಿ, ೨೮-೩-೧೯೧೫ರಲ್ಲಿ ಇನ್ನೊಂದಾವರ್ತಿ ಎಲ್ಲರೂ ಕೂಡಿ, ಬೆಂಗಳೂರಿನ ನಮ್ಮವರು ಮೊದಲನೆಯ ಮಹಾ ಸಭೆಯನ್ನು ಅಲ್ಲಿಗೆ ಕರೆಯಿಸಬೇಕೆಂದು ನಿರ್ಧರಿಸಿದರು.

ಮೊದಲನೆಯ ಮಹಾ ಸಭೆಯು ಬೆಂಗಳೂರಿನಲ್ಲಿ ಶ್ರೀ|| ಉ|| ದಿವಾನ್ ಬಹದ್ದೂರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ೨೫-೯-೧೯೧೫ರಲ್ಲಿ ಬಹಳ ಯಶಸ್ವಿಯಾಗಿ ನಡೆಯಿತು.

ಎರಡನೆಯ ಮಹಾ ಸಭೆಯು ಮದ್ರಾಸಿನಲ್ಲಿ ೩೦-೧೨ ೧೯೧೬ರಲ್ಲಿ ಶ್ರೀ|| ಉ|| ಪ್ರಾಕ್ತನ ವಿಮರ್ಶನ ವಿಚಕ್ಷಣ, ಪ್ರಾಚ್ಯ ವಿದ್ಯಾವೈಭವ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರವರ ಅಧ್ಯಕ್ಷತೆಯಲ್ಲಿ ಸಂಭ್ರಮವಾಗಿ ನಡೆಯಿತು. ಮಹಾ ಸಭೆಯ ಉದ್ದೇಶ್ಯಗಳನ್ನು ನೆರವೇರಿಸಲು ಒಂದು ಸೆಂಟ್ರಲ್ ಸಮಿತಿಯನ್ನು ಏರ್ಪಡಿಸಲಾಯಿತು. ಇದೇ ಈಗ "**ಮಂಡಯಂ**

**ಶ್ರೀವೈಷ್ಣವ ಸಭೆ'** ಎಂದು ಕೆಲಸ ಮಾಡುತ್ತಿದೆ. ಈ ಸಭೆಯ ಪರವಾಗಿ ವಸೂಲಿಗಳು ನಡೆದು ಜುಲೈ ೧೯೧೭ರಲ್ಲಿ 'ಮಂಡಯಂ ವಿದ್ಯಾರ್ಥಿನಿಲಯ'ವು ಮೈಸೂರಿನಲ್ಲಿ ಶುಭವಾಗಿ ತೆರೆಯಲ್ಪಟ್ಟಿತು. ಮಲ್ಲೇಶ್ವರದ ಸಂಸ್ಕೃತ ಪಾಠಶಾಲೆಯ ಕಟ್ಟಡದಲ್ಲಿ ವೇದಪ್ರಬಂಧಗಳ ಪಾಠಗಳೇರ್ಪಟ್ಟವು.

ಮೂರನೆಯ ಮಹಾ ಸಭೆಯು ೧-೬-೧೯೧೮ರಲ್ಲಿ ಮೈಸೂರಿನಲ್ಲಿ ದಿವಾನ್ ಬಹದ್ದೂರ್ ಎಂ. ಎ. ಪಾರ್ಥಸಾರಥಿ ಐಯ್ಯಂಗಾರ್ಯರವರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನಡೆಯಿತು. ವಿದ್ಯಾರ್ಥಿನಿಲಯವು ಸ್ಥಿರವಾಗಿ ನಡೆಸಲ್ಪಡಬೇಕೆಂದು ತೀರ್ಮಾನವಾಯಿತು. ೧೯೧೮–೧೯೧೯ರಲ್ಲಿ ಮೈಸೂರಿನ ವಿದ್ಯಾರ್ಥಿನಿಲಯವಲ್ಲದೆ ತಿರುನಾರಾಯಣಪುರದಲ್ಲಿ ಶ್ರೀ|| ಉ|| ಎಂ. ಕೆ. ತಿರುಮಲಾಚಾರ್ಯ ಸ್ವಾಮಿಗಳವರ ಪರಾಂಬರಿಕೆಯಲ್ಲಿ ಒಂದು ನಿಲಯವೂ, ಮದ್ರಾಸಿನಲ್ಲಿ ದಿವಾನ್ ಬಹದ್ದೂರ್ ಎಂ. ಒ. ಪಾರ್ಥಸಾರಥಿ ಐಯ್ಯಂಗಾರ್ ಸ್ವಾಮಿಗಳವರ ಒಂದು ಮನೆಯಲ್ಲಿ ಅವರ ಔದಾರ್ಯದಿಂದ ಒಂದು ವಿದ್ಯಾ ಸಂಸ್ಥೆಯೂ ಏರ್ಪಟ್ಟವು.

ಸಮುದ್ರಯಾನಮಾಡಿ ಬಂದವರ ಪ್ರಾಯಶ್ಚಿತ್ತ ವಿಚಾರದಲ್ಲಿ ಭಿನ್ನಾಭಿಪ್ರಾಯ ಮತ್ತು ಇತರ ಕಾರಣಗಳಿಂದ ಮಹಾ ಸಭೆಯು ಕ್ರಿ. ಶ. ೧೯೨೫ರವರೆಗೂ ಸೇರಲು ಅವಕಾಶವಾಗಲಿಲ್ಲ.

ನಾಲ್ಕನೆಯ ಅಧಿವೇಶನವು ಬೆಂಗಳೂರಿನಲ್ಲಿ ೨೬–೧೨–೧೯೨೫ರಲ್ಲಿ ಶ್ರೀ|| ಉ|| ರಾವ್‌ಸಾಹೇಬ್ **ಆರ್. ಎ. ಶ್ರೀನಿವಾಸಯ್ಯಂಗಾರ್ಯರವರ** ಅಧ್ಯಕ್ಷತೆಯಲ್ಲಿ ವೈಭವದಿಂದ ನೆರವೇರಿತು. ಈ ಅಧಿವೇಶನದಲ್ಲಿಯೇ 'ಮಂಡಯಂ ಶ್ರೀವೈಷ್ಣವಸಭೆಯು' ನಿರ್ಧರವಾಗಿ ಏರ್ಪಟ್ಟದ್ದು. ಈ ಸಭೆಯ ನಿಬಂಧನೆಗಳನ್ನು ರಚಿಸಲು ನಿರ್ಮಿತವಾದ ಸಬ್–ಕಮಿಟಿಯವರು ೧೧–೪–೧೯೨೬ರಲ್ಲಿ ತಮ್ಮ ವರದಿಯನ್ನು ಸೆಂಟ್ರಲ್ ಕಮಿಟಿಗೆ ಸಲ್ಲಿಸಿದರು. ಇಲ್ಲಿ ಸಭೆಗೆ 'ಮಂಡಯಂ ಶ್ರೀವೈಷ್ಣವ ಸಭಾ' ಎಂಬ ನಾಮಾಂಕಿತವಾಯಿತು. ನಾಲ್ಕನೆಯ ಮಹಾ ಸಭೆಯ ಅಧಿವೇಶನದಿಂದಲೇ "ಮಹಾ

ಸಭೆಯೇ'' (Conference) ಬೇರೆ, "ಮಂಡಯಂ ಶ್ರೀವೈಷ್ಣವ ಸಭೆ"ಯೇ ಬೇರೆಯಾದುವು.

ಐದನೆಯ ಅಧಿವೇಶನವು ಮೈಸೂರಿನಲ್ಲಿ ೨೯–೧೨-೧೯೨೮ರಲ್ಲಿ ಶ್ರೀ|| ಉ|| ಪ್ರೊಫೆಸರ್ ಎಂ. ಟಿ. ನಾರಣೈಯ್ಯಂಗಾರ್ಯರವರ ಅಧ್ಯಕ್ಷತೆಯಲ್ಲಿ ಉತ್ಸಾಹದಿಂದ ನೆರವೇರಿತು.

ಆರನೆಯ ಅಧಿವೇಶನವು ೨೭-೧೨–೧೯೩೦ರಲ್ಲಿ ಮದ್ರಾಸಿನಲ್ಲಿ ಶ್ರೀ|| ಉ|| ಎಂ. ಎ. ಶಿಂಗ್ರಾಚಾರ್ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ವಿತರಣೆಯಿಂದ ನೆರವೇರಿತು.

ಮಹಾ ಸಭೆಯ ಏಳನೆಯ ಅಧಿವೇಶನವು ನಮ್ಮವರ ಪಾತ್ರಸ್ಥಾನವಾದ ಮಂಡಯದಲ್ಲಿ ಶ್ರೀ ಲಕ್ಷ್ಮೀ ಜನಾರ್ಧನ ಸ್ವಾಮಿಯವರ ದೇವಸ್ಥಾನದಲ್ಲಿ ಶ್ರೀ|| ಉ|| ರಾವ್ ಬಹದ್ದೂರ್ ಎಂ. ಎ. ತಿರುನಾರಾಯಣಾಚಾರ್ಯರವರ ಅಧ್ಯಕ್ಷತೆಯಲ್ಲಿ ೧೯–೪–೧೯೩೫ರಲ್ಲಿ ಅತ್ಯಂತ ಶ್ಲಾಘನೀಯವಾಗಿ ನೆರವೇರಿತು. ಇದೇ ಸಮಯದಲ್ಲಿ ನಮ್ಮವರ ಸ್ತ್ರೀ ಸಮುದಾಯದವರ ಪ್ರಥಮ ಸಮ್ಮೇಳನವೂ ಸೌ|| ರಂಗನಾಯಕಮ್ಮ ಮಂಡಯಂ ಅವರ ಅಧ್ಯಕ್ಷತೆಯಲ್ಲಿ ಮಹಿಮೆಯಿಂದ ನಡೆಯಿತು. (ನಮ್ಮ ಸ್ತ್ರೀಯರೆಲ್ಲರೂ ಮಹಾ ಸಭೆಯಲ್ಲಿ ವಿಶೇಷ ಭಾಗವಹಿಸಿ ಮಹತ್ತರವಾಗಿ ಸಹಕರಿಸಿದರು. ಈ ಸಮ್ಮೇಳನವಾದ ನಂತರ ಸಮ್ಮೇಳನವು ನಡೆದಿಲ್ಲ.)

ಈ ಸಭೆಗಳ ಕಾರ್ಯರೂಪವಾದ ಫಲವೆಂದರೆ ಮೈಸೂರು ವಿದ್ಯಾರ್ಥಿ ನಿಲಯದ ಸ್ಥಾಪನೆ. ಈಗ ಈ ನಿಲಯಕ್ಕೆ ಮೈಸೂರು ರಮಾವಿಲಾಸ ಅಗ್ರಹಾರದಲ್ಲಿ ಒಂದು ಸ್ವಂತ ಕಟ್ಟಡವಿದೆ. ನಿಲಯದ ಕಟ್ಟಡದ ಕೆಲಸಕ್ಕಾಗಿ ಎತ್ತಿದ ೫೦೦೦ ರೂಪಾಯಿಗಳ ಡಿಬೆಂಚರ್ ಸಾಲವು ನಮ್ಮ ಮಹಾಜನಗಳ ಔದಾರ್ಯದಿಂದ ಬಹುವಾಗಿ ಸಭೆಗೇ ಕೊಡಲ್ಪಟ್ಟಿತು. ವಿದ್ಯಾರ್ಥಿ ನಿಲಯಕ್ಕೆ ವಿಶೇಷವಾಗಿ ದ್ರವ್ಯ ಸಹಾಯ ಮಾಡಿರುವ ಮಹನೀಯರ ವಿಚಾರವಾಗಿ ಬೇರೆ ಕಡೆಯಲ್ಲಿ ಪ್ರಸ್ತಾಪ ಮಾಡಲಾಗಿದೆ. ಈ ಡಿಬೆಂಚರ್ ಸಾಲದ ಮತ್ತುಮುಖ್ಯಾರದ ಯೋಜನೆಯೂ, ಮಂಡಯದಲ್ಲಿ ೧೦ ಎಕರೆ ೨೫ ಗುಂಟೆ

ತರೀ ಜಮಿನಾನು ಸಂಪಾದನೆಯಾದ ಏರ್ಪಾಡೂ ನಿವೃತ್ತ ಅಸಿಸ್ಟೆಂಟ್ ಕಮಿಷನರ್ ಶ್ರೀಮದಿತ್ಯಾದಿ ಆರ್. ತಿರುನಾರಾಯಣೈಗಾರ್ಯರವರ ಮುಂದಾಲೋಚನೆಯು ಮಹತ್ವವಾಗಿದೆ. ಈ ಮಹನೀಯರಿಗೆ ನಮ್ಮ ಸಮುದಾಯದವರ ಕೃತಜ್ಞತಾಪೂರ್ವಕ ವಂದನೆಯು ಸಲ್ಲತಕ್ಕದ್ದಾಗಿದೆ.

ವಿದ್ಯಾರ್ಥಿನಿಲಯವು ಯಶಸ್ವಿಯಾಗಿ ನಡೆಯುವಂತೆ ಬದ್ಧಕಂಕಣರಾಗಿ ದುಡಿದು ವಿದ್ಯಾರ್ಥಿಗಳಿಂದ ತಾಯಿತಂದೆಗಳಂತೆ ಪ್ರೀತಿಯನ್ನು ಸಂಪಾದಿಸಿದ ಶ್ರೀ|| ಉ|| ಅಪ್ಪಳಾಚಾರ್ಯ ಸ್ವಾಮಿಗಳ ಮತ್ತು ಶ್ರೀ|| ಉ|| ಕುಮಾರ ಶ್ರೀನಿವಾಸಯ್ಯಂಗಾರ್ಯರುಗಳ ಸೇವೆಗಳು ಚಿರಸ್ಮರಣೀಯವಾದುವು.

ಕೆಲವು ಮಹನೀಯರ ಭಾವಚಿತ್ರಗಳೂ, ಸಾಮೂಹಿಕ ಭಾವಚಿತ್ರಗಳೂ ವಿದ್ಯಾರ್ಥಿನಿಲಯವನ್ನು ಅಲಂಕರಿಸಿವೆ. ಇನ್ನೂ ಅನೇಕ ಭಾವಚಿತ್ರಗಳನ್ನು ಶೇಖರಿಸಿ, ವಿದ್ಯಾರ್ಥಿನಿಲಯದಲ್ಲಿ ಪ್ರದರ್ಶಿಸುವ ಯತ್ನವು ನಡೆಯುತ್ತಲೇ ಇರಬೇಕು.

# ಪರಿಶಿಷ್ಟ i

## ಕೆಲವು ಶಾಸನಗಳು

ಹಿಂದಣ ಪ್ರಕರಣಗಳಲ್ಲಿ ಅಲ್ಲಲ್ಲಿ ಸೂಚಿಸಿರುವ ಕೆಲವು ಶಾಸನಗಳ ನಕಲುಗಳನ್ನು ಸ್ವಲ್ಪ ವಿವರಣೆಯೊಡನೆ ಈ ಪ್ರಕರಣದಲ್ಲಿ ನಮೂದಿಸಿದೆ. ಆದಷ್ಟು ಮಟ್ಟಿಗೆ ಕಾಲಕ್ರಮವಾಗಿ ಬರೆದಿದೆ. ಆಧಾರವನ್ನು ತಿಳಿದಮಟ್ಟಿಗೆ ಸೂಚಿಸಿದೆ. ಇನ್ನೂ ಕೆಲವು ಶಾಸನಗಳಿರುವುದಾಗಿ ಪಾರಂಪರ್ಯವಾದ ಹೇಳಿಕೆ ಇದೆ. ಶಾಸನಗಳು ಇನ್ನೂ ಗೋಚರವಾಗಲಿಲ್ಲ.

ನಮ್ಮ ಚರಿತ್ರೆಗೆ ಅನ್ವಯಿಸುವ ಕೆಲವು ಶಾಸನಗಳೇನೋ ಭದ್ರವಾಗಿವೆ. ಮಂಡಯದಲ್ಲಿ ಶ್ರೀ ಜನಾರ್ದನ ಸ್ವಾಮಿಯವರ ಪೂರ್ವದಿಕ್ಕಿನ ಗಜೇಂದ್ರ ಮೋಕ್ಷದ ಕೊಳದ (ಗೋವಿಂದರಾಜ ಪುಷ್ಕರಣಿಯ) ನಾಲ್ಕು ಮೂಲೆಗಳಲ್ಲಿಯೂ, ಮಂಡಯದ ತಾಲ್ಲೋಕಿನ ನಂಬರ್ [illegible], [illegible], [illegible],

ಮತ್ತು ೬೬ನೆಯ ಶಾಸನಗಳು ಇವೆ. ಇವು ಬಹು ಮುಖ್ಯವಾದುವು. ಗೋವಿಂದರಾಜೋದ್ಯಾನವೆಂಬ ಪೂರ್ವದಿಕ್ಕಿನ ತೋಪು (ತಿರುಮಲಾಚಾರ್ಯರ ತೋಪು) ಮಂಡಯುದ ಸಕ್ಕರೆ ಕಂಪನಿಯುವರ ವಶವಾಗಿ ಹೋಯಿತು. ಮೇಲೆ ವಿವರಿಸಿದ ನಾಲ್ಕು ಶಾಸನಗಳೂ ಶಿಥಿಲವಾಗುವ ಸಂಭವ ತೋರಿ ಬರುತ್ತಿದೆ. ಇವು ಸ್ಥಿರವಾಗಿ ಕಾಪಾಡಲ್ಪಡಬೇಕೆಂದು ಸರ್ಕಾರದವರಲ್ಲಿ ಜರೂರಾದ ಮನವಿಯೊಂದನ್ನು ಶ್ರೀ|| ಉ|| ಪ್ರಧಾನ್ ತಿರುಮಲರಾಯರ ವಂಶಸ್ಥರೂ ಇತರ ಮಂಡಯದ ಶ್ರೀವೈಷ್ಣವ ಮಹಾ ಜನರೂ ಸಲ್ಲಿಸಬೇಕಾಗಿ ಪ್ರಾರ್ಥನೆ. **ಇದು ಬಹಳ ಮುಖ್ಯವಾದ ಕರ್ತವ್ಯ.**

# *Epigraphica Carnatica*

## ಮಂಡ್ಯ ತಾಲೂಕು ೭೦ನೇ ನಂಬರ್ ಶಾಸನ

ಮಂಡ್ಯದ ಬಸರಾಳು ಹೋಬಳಿ ಹೊಸ ಬೂದನೂರು ಗ್ರಾಮದ ಕೇಶವದೇವಸ್ಥಾನವೆಂದು ಕರೆಯಲ್ಪಡುತ್ತಿರುವ ಅನಂತಪದ್ಮನಾಭದೇವರ ಗುಡಿಯ ಒಳ ಪಾರ್ಶ್ವ ದಕ್ಷಿಣ ಕಡೆಯಲ್ಲಿ.

ಪ್ರಮಾಣ 4′7″ × 1′11″

೧ ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀಮತು ಪ್ರತಾಪ
ಚಕ್ರವರ್ತಿ ಹೊಯ್ಸಳ ಭುಜಭಲ ಶ್ರೀ ವೀರನಾರಸಿಂ
ಹ ದೇವರಸರುಪ್ರಿಥ್ವಿ ರಾಜ್ಯಂ ಮಾಡುತ್ತಿದಲಿ || ಸಕವರುಷ ||
ಸಾವಿರದ ನೂರತ್ತೊಂಭತ್ತ ಎಂಟನೆಯ || ಧಾತು ಸಂ
೫ ವತ್ಸರದ ಪುಷ್ಯ ಸು ೧ ಸೋದಂದು ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿ
ತಂ ಶ್ರೀಮುದುದು ಭವಸರ್ವ್ವಜ್ಞ ಪದುಮನಾ
ಭ ಪುರದ ಶ್ರೀಮದಸೇಷ ಮಹಾಜನಂಗಳಿಗೆ ಯಾ
ದವ ನಾರಾಯಣಪುರವಾದ ಸುತ್ತಲ ಕೇಶವದೇವರ ಸ್ಥಲಿಕ
ನಂಬಿಪಿಳ್ಳೆಯ ಮಗ ಪುರುಷೋತ್ತಮ ದೇವನೂ ಅವರಂ

ಈ ಆದೂರಸ ಮಗ ನಂಬಿಪಿಳ್ಳಿಯಿಂತ್ತಿಬರೂ ಕೊಟ್ಟಶಾಸ
ನ ಕ್ರಮವೆಂತೆಂದಡೆ ಆ ಕೇಶವದೇವರ ದೇವದಾನದವೂ
ರುಮಾರಕಾಡನನು ಕುಡಿನಿಂತಾ ದೇವದಾನವಾಗಿ ಮಕ್ಕ
ಳು ಮಕ್ಕಳು ತಪ್ಪದೆ ಆ ಚತುಸಿಸ್ಸಿಮಾ ಸಮನ್ವಿತವ
ಹ ಆ ಮರ ಕಾಡನಗದೆ ಬೆದಲೊಳಗಾದ ಭೂಮಿಯೊಳಗೆ ತೆಂ
ಗುತವುಂಗು ಮುಖ್ಯವಾದ ಸಘುಸ್ತಸ್ಥಾವರ ವಹ ಫಲವೃ
ಕ್ಷಂಗಳನೂ ಯಿಕ್ಕಿಕೊಂಡು ಕೆರೆನಾಕಟ್ಟಿಕೊಂಡು ಕಾಲುವೆ
ಯನೂ ತಂದುಕೊಂಡು ಸಂತಾನಗಾಮಿಯಾಗಿ ಬೋಗಿಸುವರು
ಆ ಕ್ಷೇತ್ರದೊಳಗೆ ಆ ಕೇಶವದೇವರ ಅಮ್ರಿತಪಡಿಗೆ ಆ ಕೆರೆಯ ಹಿಂದೆ ಗದ್ದೆ
ಸಲಗೆ ಮೂರು ಬೆದಲು ಅಯಿನೂರವೂಕೊಂಡ ಆ ವೂರಿಂಗೆ
ಸಿದ್ದಾಯಕಟ್ಟೆ ಗುತ್ತಗೆ ವರುಷಂಪ್ರತಿ ಗದ್ಯಾಣ ಹತ್ತನೂ ಕಟ್ಟುಕತ್ತಾ
ಗೆ ಪಿಂಡಾದಾನ ಸರ್ವಬಾಧೆ ಪರಿಹಾರವಾಗಿ ಮಾಡಿ | ಆ ದೇ
ವರ ಚೈತ್ರ ಪಯಿತ್ರದ ಪರ್ವಕ್ಕೆ ವರ್ಷಂಪ್ರತಿ ನೂಲುಹಲ
ಹತ್ತು ಅಕ್ಕಿಕೊಳಗ ಹತ್ತು ಬೆಂಣ್ಣೆಕೊಳಗ ಎರಡು ಯಿ ಮರಿಯಾದೆಯ
ಲೆಂದೆಂದಿಗೆವೂ ಆಚಂದ್ರಾರ್ಕಸ್ಥಾಯಿಯಾಗಿ ಕೊಂಡು ಆ ಮಹಾ
ಜನಂಗಳಿಗೆ ಆಛಂದ್ರಾರ್ಕ ಸ್ಥಾಯಿಯಾಗಿ ಬೋಗಿಸುವರು
ಮಂಗಳಮಹಾ ಶ್ರೀ ಶ್ರೀ ಶ್ರೀ|| ಯಿಂ ತಪ್ಪುವದಕ್ಕೆ ಸಾಕ್ಷಿಗಳು
ವೀರನರಸಿಂಹಪುರದಿಗಲರರಕೆರೆಯ ಮಹಾ..........
ಜನಂಗಳು | ಬಲ್ಲಾಳು ಚತುರ್ವೇದಿ ನರಸಿಂಹಪುರವಾದಮ ||
ದೂರ ಮಹಾ ಜನಂಗಳು ಶ್ರೀಮದನಾದಿಯಗ್ರಹಾರಂ
ಹಿರಿಯ ಅರ್ಸನ ಕೆರೆಯ ಮಹಾ ಜನಂಗಳು ಶ್ರೀಮದನಾ
ದಿ ಯಗ್ರಹಾರಂ ಮಂಡಿಯದ ಮಹಾ ಜನಂಗಳು ಮಲ್ಲಿಕಾ
ರ್ಜುನ ಪುರವಾದ ಗುತ್ತಲ ಮಹಾ ಜನಂಗಳು ಇಂತಿವರು
ಭಯಾನುಮಥದಿಂ ಪತ್ರಸಾಸನವ ನೋಡ ಬರೆದ ಆಚಾರಿ ಮ
ಸನೋಜ ಶ್ರೀ ಲಕ್ಷ್ಮೀನರಸಿಂಹ (ಗ್ರಂಥಾಕ್ಷರದಲ್ಲಿ)

೩೫ ಶ್ರೀ ಸರ್ವಜ್ಞ ಶ್ರೀ ನರಸಿಂಹ ಶ್ರೀ ಮಲ್ಲಿಕಾರ್ಜುನ (ನಾಗರಾಕ್ಷರದಲ್ಲಿ)

**ವಿವರಣೆ**—ಈ ಶಾಸನದ ಕಾಲ ಕ್ರಿ .ಶ. ೧೨೭೬. ಇಷ್ಟು ಹಿಂದಣ ಕಾಲದಲ್ಲೇ ಮಂಡಯದ ಮಹಾ ಜನಗಳು "ಶ್ರೀಮದನಾದಿಯಗ್ರಹಾರಂ ಮಂಡಿಯದ ಮಹಾ ಜನಂಗಳು" ಎಂದು ಹೊಗಳಲ್ಪಟ್ಟಿರುವರು. ಅಂದರೆ ಮಂಡಯವು ಕ್ರಿ. ಶ. ೧೨೭೬ಕ್ಕೆ ಎರಡು, ಮೂರು ಅಥವಾ ಇನ್ನೂ ಹೆಚ್ಚು ಶತಮಾನಗಳ ಹಿಂದೆಯೇ ಪ್ರಸಿದ್ಧಿಯಾಗಿದ್ದಿರಬೇಕು. ಇದು ಮಂಡಯವನ್ನು ಶ್ರೀ ರಾಮಾನುಜಾಚಾರ್ಯರ ಅಥವಾ ಇನ್ನೂ ಹಿಂದಣ ಕಾಲಕ್ಕೆ ಸೇರಿಸುತ್ತದೆ.

# *Epigraphica Carnatica*

## ಶ್ರೀರಂಗಪಟ್ಟಣದ ತಾಲ್ಲೂಕು ೮೯ನೇ ನಂಬರ್ ಶಾಸನ

ಮೇಲುಕೋಟೆಯ ಜೀಯರ ದೇವಸ್ಥಾನದ ಕೈಸಾಲೆ ಎಡಪಾರ್ಶ್ವದಲ್ಲಿ ನಟ್ಟ ಕಲ್ಲಿನಲ್ಲಿ

ಪ್ರಮಾಣ *6′—6″ × 1′—6″*.

ಉತ್ತರೇ ಸಹ್ಯಜಾತೀರೇ ಸರ್ವ್ವಸ್ಥಾನ ಸಮುಚ್ಚಯೇ (೧) ನಾರಾಯಣ
ಗಿರಉ ಶ್ರೀರ್ಮಾ ಆಸ್ತೇ ನಾರಾಯಣಸ್ಸ್ವಯಂ ||
ಶಾಸನಂ ಯತಿರಾಜಸ್ಯ ಸತಾಂ ಮೂರ್ಧ್ನಿಕೃತಾಸನಂ |
ತ್ರಾಸನಂ ದುಷ್ಟ ಸಿದ್ಧಾಂತಾವಾಸ
ನಾಥೂ ಸರಾತ್ಮನಾಂ || ಯದುವಂಶ ಮಹಾಂಭೋಧಿ
ಚಂದ್ರಮಾಶ್ಚಂದ್ರ ಕೀರ್ತಿಮಾನ್ |
ಶ್ರೀ ಮಲ್ಲಿಕಾರ್ಜುನೋನಿತ್ಯಂ ಜೀಯಾದಾಚ್ಯಂದ್ರತಾರಕಂ ||
ಶ್ರೀಮನ್ ತಿಮಣ್ಣದಂ
ಡೇಶೋ ಲೋಹಿತಾನ್ವಯ ಸೇಖರಃ || ಜೀಯಾತ್ ತಸ್ಯಾಪಿ
ಮಹಿಷೀ ರಂಗಾಂ ಬಾಮಂ

ಗಲಾತ್ಮಿಕಾ|| || ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಯಾದವಕುಲ
ಪರಂಪರಾ ಪ್ರಾಪ್ತಸ
ಂಗಮರಾಯ ಬುಕ್ಕರಾಯ ಹರಿಹರರಾಯ ದೇವರಾಯ ವಿಜಯರಾಯ
ಗಜಬೇಂಟಿಕಾ ಪ್ರಹುಡ ದೇವರಾಯ ಮಹಾರಾಯರ ಕುಮಾರರು ಶ್ರೀ
ಮಾನ್ ಮಹಾರಾಜಾಧಿರಾಜ ರಾಜಪರಮೇಶ್ವರ ಅರಿರಾಯವಿಭಾಡ
ಭಾಸೆಗೆ ತಪುವ ರಾಯರ ಗಂಡ ಚತುಸಮುದ್ರಾಧಿಪತಿ ಶ್ರೀ ವೀರಪ್ರತಾಪಯಿ
ಂಮ್ಮಡಿ ಪ್ರಉಡದೇವರಾಯರಾದ ಮಲ್ಲಿಕಾರ್ಜುನಮಹಾರಾಯರು ಸುಖಸಂ
ಖಥಾವಿನೋದದಿಂ ಪೃಥ್ವೀರಾಜ್ಯಗೆಯೋ ಉತ್ತಯಿರಲು **ನಾಗಮ**
**ಂಗಳದ ಮಹಾಪ್ರಭು ಪರಮ ಭಾಗವತಲೋಹಿತಕುಲಶೇಖರಶಿಂಗಣ**
**ಗಳ ಮಖಳು ಸೀತಾಂಬಿಕಾತಪಃ ಫಲಃ ವೇದಮಾರ್ಗ**
**ಪ್ರತಿಷ್ಠಾ ಚಾರ್ಯ್ಯ ಯಾ**
**ದವಗಿರಿ ಜೀರ್ಣ್ನೋದ್ಧಾರಕ ಯದುಗಿರಿ ನಾರಾಯಣ**
**ಚರಣಾರವಿಂದ ಭಕ**
**ತತ್ರಯಿಕನಿಷ್ಟತುಲಾ ಪುರುಷಾಧಿ ಮಹಾದಾನವ್ರತ ದೀಕ್ಷಿತರಂಗಾ**
**ಂಬಿಕಾ ಮನೋವಲ್ಲಭ ಶ್ರೀರ್ಮ ಮಹಾಪ್ರಧಾನಂ ತಿಂಮ್ಮಣ್ಣದಂಡ್ನಾ**
**ಯಕರು** ಖೇಭ ರಾಮೇಂದು ಗಣಿತವಾದ ಶಕ ವರುಷ ೧೩೭೦ನೆಯ ವ
ರ್ತಮಾನ ವಹ ಬಹುಧಾನ್ಯ ಸಂವತ್ಸರದ ಮಾರ್ಗ್ಗಶಿರ ಬ ೧೨ ಶುಕ್ರವಾರದ
ಲು ಬರಸಿದ ಧರ್ಮಸಾಧನ ಕ್ರಮವೆಂತೆಂದರೆ ಶ್ರೀಮದನಾದಿ ಮಹಾಸ್ವಾಮಿ
ಸ್ಥಾನಂ ಶ್ರೀವಯಿಕುಂಠ ವರ್ದ್ಧನಕೃತಾ ಭೂಲೋಕವಯಿಂಕಜ್ಞಾನಮಂಟಪ
ಯಾದವಗಿರಿತಿರುನಾರಾಯಣಪುರವಾದ ಮೇಲುಗೋಟೆಯ ಶ್ರೀನಾರಾಯಣ
ಪ್ರೀತ್ಯರ್ಥ್ಥವಾಗಿ **ತಂಮಧಂರ್ಮ್ಮ ಪತ್ನಿ ಪರಮಭಾಗವತೋತ್ತಮೆಯಾ**
**ದ ರಂಗಮ್ಮನವರು** ರತ್ನಾಭರಣ ರಚಿತ ಪರಿಯಂಕಮಂ
ಟಪ ಮಹಾ ತಟಾದಿ ಸಕಲ ವಿಧ ಕಯಿಂಕರ್ಯ್ಯಗಳನು ಮಾಡಿ ಆಸ್ಥಾ
ನದಲಿ ದಡಬೆಳೆದು ಆರೂಪಾಗಿ ಇದ್ದ ನಿವೇಶನವನು ಕ್ರಯವಾಗಿ ಕೊ
ಂಡು ದೇಶಾಂತ್ರಮಠವಾಗಿ ಕಲ್ಪಿಸಿದ ರಂಗಮಂಟಪದಲ್ಲಿ ತಂಮ್ಮ ಕಯಿಂಕ
ರ್ಯ್ಯವಾಗಿ ಇಪ್ಪತ್ತನಾಲ್ಕು ಪರಮವಯಿದೀಕ ವಯಿಷ್ಣವ ಬ್ರಾಂಹ್ಮ

ಣ ಭೋಜನ **ರಾಮಾನುಜಕೂಟಲು ನಡಿಯಬೇಕೆನಲಾಗಿ ನಾಉಣ**
ಧರ್ಮವು ಆ ಚಂದ್ರಾರ್ಕ್ಕಸ್ಥಾಯಿ ಆಹಂತಾಗಿ ಇಂಮಡಿ ಪ್ರ
ಉಡ ದೇವರಾಯ ಮಹಾರಾಯರಿಗೆ ಬಿಂನ್ನಹಂ ಮಾಡಿ ಹು
ಯಿಸಳ ರಾಜ್ಯದ ಕುಉುವಂಕ ನಾಡ ವೆಂಟೆಯದೊಳಗೆ ಮೇಲುಗೋ
ಟೆಯ ಕಾಲುವಳಿಕುಳ ಎಂಭತ್ತು ವರಹನಸೆತ್ತುವ ಬಲೇನಹ
ಳ್ಳಿ ಯಲವದಹಳ್ಳಿಯ ಗ್ರಾಮವೆರಡು ಆ ಗ್ರಾಮವೆರಡ ಕೆರಂ
ಗ ಸಮುದ್ರದ ಕೆಱೆಯ ಕೆಳಗೆ ಶ್ರೀ ಚಲಪಿಳೆರಾಯರ ಭ
ಂಡಾರಕೆ ಉತ್ತು ಬಿತ್ತಿವಾರ?ನಿಕ್ಕ್ಯ? ಗದೆಯ ಕಳದು ಆ ಗ್ರಾ
ಮವೆರಡಕೆ ಸಲುವಗದೆ ಆ ಕೆಱೆಯ ನೀರು ವರಿಯಲಿ ಬಲೇನ
ಹಳಿಯ ಸೀಮೆಯಲು ಆಗಾಮಿಯಾಗಿ ಬೆಳವಗದೆ ವೊದಲಾಗಿ
ಆ ಗ್ರಾಮವೆರಡರ ತಾಂಬ್ರಸಾಧನಸ್ಥ ಚತುಸೀಮೆಯೊಳಗುಳ
ಗದ್ದೆ ಬೆದ್ದಲುತೋಟ ತುಡಿಕೆವಕ್ಕಲು ಮಕ್ಕಳು ಕಿಱುಕಳ ಸುಂಕ ಸು
ವರ್ಣಾದಾಯ ಎನುಳ ಆ ಸಕಲಸ್ವಾಮ್ಯವನು ಸರ್ವ್ವ ಮಾನ್ಯವಾಗಿ
ಚಂದ್ರಾರ್ಕ ಸ್ಥಾಯಿಯಾಗಿ ದಾನಂಧಾರಾ ಪೂರ್ವಕವಾಗಿ ರಾ
ಯರ ಕೆಯ್ಯಲಿ ತಾಂಬ್ರಸಾಧನವಂ ಪಡದು ಮಠದ ಕಟ್ಟಿ
ಳೆಯ ಧರ್ಮ್ಮವೆಚಕೆ ಗ್ರಾಮಾದಾಯ ಉನೆಱಸದ ಕಾರಣ
ನಾಲ್ವತು ವರಹನ ಆದಾಯದ ಸರ್ವ್ವಮಾನ್ಯದ ಕ್ಷೇತ್ರವನೂ
ನಾನೂರು ವರಹಕೆ ಕ್ರಯಂ ಕೊಂಡು ಕೊಟ್ಟು ಶ್ರೀ ಸಂ
**ಪತ್ಕುಮಾರ ಸಕಲವಿದ ಕಯಿಂಕರ್ಯ ಧರ್ಮ್ಮ ಬೋಧಕರಾದ**
**ರಾಮಾನುಜ ಜೀಯ್ಯರವಶವಾಗಿ ಕಲ್ಪಿಸ್ತವಾಗಿ** ಆರಾಮಾನುಜಜೀಯ್ಯ
ರು ಆ ಮಠದಲೆ ಯಿದ್ದು ಆ ಮಠಶೇಷವಾದ ಗ್ರಾಮಕ್ಷೇತ್ರಾದಿ ಆ
ಸಕಲಸ್ವಾಮ್ಯವನು ಆಗುಮಾಡಿಕೊಂಡು ಆ ರಾಮಾನುಜ ಕೂಟದ
ಕಟ್ಟಿಳೆ ರಂಗಮುಂಠಪದ ಲಕ್ಷುಮಿದೇವಿಯವರ ಚೆಱಪುವ್ರುಂದಾ
ವನಮಠದ ಭಾಣಸಿ ಪರಿಚಾರಕರ ಜೀವಿತ ಮೊದಲಾದ ಧರ್ಮ್ಮವೆಚಗ

ಳ ಕಳಮ ಮಿಗಿಲುಂಟಾದರೆ ಆ ಮಠವ ಸೋಪೆ ಸುಂಣಕಸಮು ಸಕಂಬುಮು ಜಗಉಡೆ ತೊಡೆ ಮುಂತಾದ ಏನುಳಮಠವ ಕೈಯಿ ಂಕರ್ಯಕೆ ಮಾಡಿಕೊಂಡು ಯಿಧರ್ಮ್ಮವನು **ತಮ ಶಿಷ್ಯ ಪ್ರಶಿಷ್ಯ ಯತಿ ಪರಂಪರಿಯಾಗಿ ಆ ಚಂದ್ರಾರ್ಕ ಸ್ಥಾಯಿಯಾಗಿ ನಡೆಸಿಕೊಂಬದು**

**ಎಂದು**...................... ..ಯುಕ್ತರಾಮಾನುಜ ಜೀಯರಿಗೆ

...........................................................................................

.........................................ಬರಿಸ್ತ ಶಿಲಾಶಾಸ

...........................................................................................

...........................................................................................

...........................................................................................

..................ಸ್ವದತ್ತಾಂ ಪರದತ್ತಾಂ ವಾಯೋಹರೇತ ವಸುಂದರಾಂ |

ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ||

**ವಿವರಣೆ—**ಈ ಶಾಸನದ ಕಾಲ ಕ್ರಿ. ಶ. ೧೪೫೮. ಲೋಹಿತ **ಗೋತ್ರದ** ಶಿಂಗರಸ ಒಡೆಯರ ಮಕ್ಕಳು ಶ್ರೀಮಂನ್ ಮಹಾಪ್ರಧಾನಂ ತಿಮ್ಮಣ್ಣ ದಂಡ ನಾಯಕರು ನಾಗಮಂಗಲಾಧಿಪತಿಯಾಗಿದ್ದಾಗ ಮೇಲುಕೋಟೆಯನ್ನು ಜೀರ್ಣೋದ್ಧಾರ ಮಾಡಿದ್ದು; ಇವರ ತಾಯಿ ಸೀತಾಯಮ್ಮ. ಇವರ ಹೆಂಡ ತಿ ಪರಮಭಾಗವತೋತ್ತಮೆ .ರಂಗನಾಯಕಮ್ಮ; ಈ ಶ್ರೀ ರಂಗನಾಯಕಮ್ಮ ನವರ ಕೋರಿಕೆಯಂತೆ ಮೇಲುಕೋಟೆಯ ದೇವಸ್ಥಾನದಲ್ಲಿ ರಾಮಾ ನುಜ ಕೂಟವನ್ನು ಏರ್ಪಡಿಸಿ ಈ ಧರ್ಮವು ಶಿಷ್ಯ ಪ್ರಶಿಷ್ಯ ಯತಿಪರಂಪರೆ ಯಾಗಿ ನಡೆಯಿಸಿಕೊಂಡು ಬರಲು ಶ್ರೀ ಯದುಗಿರಿ ಯತಿರಾಜಮಠದ ಶ್ರೀ

ರಾಮಾನುಜ ಜೀಯರ್ ಸ್ವಾಮಿಗಳವರಿಂಗೆ ಒಪ್ಪಿಸಿದ್ದು; ಈ ಮುಂತಾದ ಅಂಶಗಳು ನಿರೂಪಿತವಾಗಿವೆ. ಈ ಶಾಸನವು ಶ್ರೀ|| ಉ|| ತಿರುಮಲೆ ಗೋವಿಂದರಾಜ ಉಡೈಯರವರಿಂಗೆ ಮಂಡಯವು ಲಭಿಸಿದ ಕ್ರಿ. ಶ. ೧೫೫೬ಕ್ಕಿಂತ ಹಿಂದಣದು. ಮಂಡಯದ ಶ್ರೀವೈಷ್ಣವರ ಪ್ರಾಚೀನತೆಯನ್ನು ತೋರ್ಪಡಿಸುತ್ತದೆ.

## *Epigraphica Carnatica*

### ಮಂಡ್ಯ ತಾಲ್ಲೂಕು ೧೫ನೇ ನಂಬರ್ ಶಾಸನ

### ಮಂಡ್ಯದ ತಾಮ್ರ ಶಾಸನ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ |
ತ್ರೈಲೋಕ್ಯ ನಗರಾರಂಭಾ ಮೂಲಸ್ತಂಭಾಯ ಶಂಭವೇ ||
ಹರೇತ್‌ಹಲಾ ವಾರಾಹಸ್ಯ ದಂಷ್ಟ್ರಾದಂಡಸ್ಸಪಾತನಃ |
ಹೇಮಾದ್ರಿಕಲಶಾಯತ್ರ ಧಾತ್ರೀಚ್ಛತ್ರಯಾದಧೌ
ಕಲ್ಯಾಣಾಯಾಸ್ತು ತದ್ಧಾಮಪ್ರತ್ಯೂಹ ತಿಮಿರಾಪಹಂ ಯದ್ಗಜೋಪ್ಯ
ಗಜೋದ್ಭೂತಂ ವಿಷ್ಣುನಾಪಿಚ ಪೂಜ್ಯತೇ ||
ಅಸ್ತಿಕ್ಷರಮಯಾದ್ದೇವೈಃ ಮಥ್ಯಮಾನಾನ್ಮಹಾಂಬುಧೇಃ |
ನವನೀತಮಿವೋದ್ಭೂತಂ ಅಪನೀತ ತಮೋಮಹಃ
ತಸ್ಯಾಸತ್ತನಯಸ್ತಪೋಭಿರತುಳೈರನ್ವರ್ಥ ನಾಮಾ ಬುಧಃ
ಪುಣ್ಯೈರಸ್ಯಪುರೂರವೋ ಭಜಬಲೈರಾಯು ದ್ವಿಷಾಂ ನಿಷ್ಕೃತಂ |
ತಸ್ಯಾಯುರ್ನಹುಷೋಸ್ಯ ತಸ್ಯತನಯೋ ಜಜ್ಞೆ ಯಯಾತಿಕ್ಷಿತೌಖ್ಯಾ
ತಸ್ತಸ್ಯ ಚತುರ್ವರ್ಗಸುವರ್ಗಸು ನಿಧಃ ಶ್ರೀದೇವಯಾನೀಸುತೈಃ |
ತದ್ವಂಶೇ ದೇವಕೀಜಾನಿಃ ದಿದೀಪೇ ತಿಸ್ರುಭೂಪತಿಃ |
ಯಶಸ್ವೀ ತುಳುವೇಂದ್ರೇಷು ದಧೌ ಕೃಷ್ಣ ಇವಾನ್ವಯಂ
ತತೋಭೂದ್ಬುಕ್ಕ ಭೂಜಾನಿರೀಶ್ವರಕ್ಷಿತಿಪಾಲಕಃ |
ಅಜಾತ ಸುಗುಣಾಭ್ರಂಶೋ ಮೌಳಿರತ್ನಂ ಮಹಿಭುಜಾಂ |

ಸರಸಾದುದ ಭೂತ್ತಸ್ಮಾತ್ ನರಸಾಪನಿಪಾಲಿಕಃ |
ದೇವಕೀನಂದನಾತ್ಕ್ಮಾನ್ನೋ ದೇವಕೀನಂದನಾದಿವ ||
ಕಾವೇರೀ ಮಾಶುಬಧ್ವಾ ಬಹುಳಜಲರಯಾಂಯೋ ವಿಲಂಘ್ಯೈವಶೇತುಂ
ಜೀವಗ್ರಾಹಂ ಗೃಹೀತ್ವಾ ಸಮಿತಿ ಭುಜಬಲಾತ್ತಂಚ ರಾಜ್ಯಂ ತದೀಯಂ |
ಕೃತ್ವಾ ಶ್ರೀರಂಗಪೂರ್ವಂತದಿಹ ನಿಜವಶೇಪತ್ತನಂ ಯೋಬಭಾಸೀ
ಕೀರ್ತಿಂ ಸ್ತಂಭಂ ನಿಧಾಯ ತ್ರಿಭುವನ ಭವನೇ ಸ್ತೂಯಮಾನಾಪದಾನಃ |
ಚೇರಂ ಚೋಳಂ ಚ ಪಾಂಡ್ಯ ಚ ತನಪಿಚ ಮಧುರಾವಲ್ಲಭಂ ನಾಮಭೂಷಂ
ವಿರ್ಯೋದಗ್ರಂ ತುರುಷ್ಕಂ ಗಜಪತಿನೃಪತಿಂ ಚಾಪಿಜಿತ್ವಾತದನ್ಯಾನ್ |
ಆ ಗಂಗಾತೀರ ಲಂಕಾ ಪ್ರಥಮಚರಮ ಭೂಭೃತ್ತಟಾಂತರ್ನಿತಾಂತಂ
ಖ್ಯಾತಕ್ಷೋಣೀಪತೀನಾಂ ಸ್ರಜಮಿವ ಸಿರಸಾ ಶಾಶನಂ ಯೋವ್ಯತಾನೀತ್
ವಿವಿಧ ಸುಕೃತೋದ್ದಾಮೆ ಸೋಮೇಶ್ವರ ಪ್ರಮುಖೆ ಮುಹುರ್ಮುದಿತ
ಹೃದಯಸನ್ನಿಧೇ ಸ್ಥಾನಂ ನ್ಯಧತ್ತನೃಧಾವಿಧಿಃ | ಭುಧಪನಿಕರಂ ನಾನಾ
ದಾನೇನ ಯೋ ಭುವಿತೋಷಯರ್ ತ್ರಿಭುವನಜನೋ
ಗ್ಗೀತಂ ಪೀತಂ ಯಶಃ ಪುನರಾತ್ತವಾನ್ || ತಿಪ್ಪಾಜೆ
ನಾಗ್ಗಲಾದೇವ್ಯೋಃ ಕೌಶಲ್ಯಾ ಶ್ರೀ ಸುಮಿತ್ರಯೋಃ |
ದೇವ್ಯೋರಿಹ ನೃಸಿಹ್ಮೇನ್ದ್ರಾತ್ತಸ್ಮಾತ್ದಶರಥಾದಿವ ||
ವೀತಾವಿನಯನೌ ರಾಮಲಕ್ಷ್ಮಣಾವಿವನಂದನೌ |
ಜಾತಾ ವೀರನೃಸಿಹ್ಮೇಂದ್ರ **ಕೃಷ್ಣರಾಯಮಹೀಪತೀ** ||
ವೀರ ಶ್ರೀ ನಾರಸಿಹ್ಮ ಸ್ವವಿಜಯನಗರೇ ರತ್ನಸಿಂಹಾಸನಸ್ಥಃ
ಕೀರ್ತ್ಯಾನಿತ್ಯಂ ಸಿರಸ್ಯ ನೃಗನಳನಹುಷಾನಪ್ಯಥಾನ್ಯಾನ್ನ
ದಾನ್ಯಾನ್ | ಆಸೇತೋರಾಸುಮೇರೋ ರವನಿಸುರಸುತಃ
ಸ್ವೈರಮಾಜೋದಯಾದ್ರೇಃ | ಆ ಪಾಶ್ಚಾತ್ಯಾ ಚಲಾಂತಾತ್
ಸಕಲ ಹೃದಯಮಾವರ್ಜ ರಾಜ್ಯಂ ಶಶಾಸ || ನಾನಾ ದಾನಾನ್ಯ
ಕಾರ್ಷೀತ್ಕನಕ ಸದಸಿಯಃ ಶ್ರೀ ವಿರೂಪಾಕ್ಷದೇವಸ್ಥಾನೇ ಶ್ರೀ ಕಾಳ
ಹಸ್ತಿ ಶಿಖರನಗರೇ ವೆಂಕಟಾದ್ರೌಚ ಕಾಂಚ್ಯಾಂ | ಶ್ರೀಶೈಲೇಶೋಣ
ಶೈಲೇಮುಹತಿ ಹರಿಹರೇ ಹೋಬಳೇ ಸಂಗಮೇಚ

ಶ್ರೀರಂಗೇ ಕುಂಭಕೋಣೇ ಹತತಮಸಿ ಮಹಾನಂದತೀರ್ಥೇ ನಿವೃತ್ತೌ ||
ಗೋಕರ್ಣೇರಾಮಸೇತೌ ಜಗತಿತದಿತರೇ ಷ್ವಪ್ಯಶೇಷೇಷುಪುಣ್ಯಾ
ಸ್ಥಾನೇಷ್ವಾರಬ್ಧ ನಾನಾವಿಧ ಬಹುಳ ಮಹಾದಾನ ವಾರಿಪ್ರವಾಹೈಃ |
ಯಸ್ಯೋವಂ ಚತುರಂಗ ಪ್ರಕರಖುರರಜಃ ಶುಷ್ಯದಂಭೋಧೀ
ಮಗ್ನಷ್ಮಾಭೃತ್ಪ ಕ್ಷಚ್ಛಿದೋದ್ಯತ್ಕುಲಿಶಧರ ಭಯಾಕುಂಠಿತಾಭೂತ್ |
ಬ್ರಹ್ಮಾಡಂ ವಿಶ್ವಚಕ್ರಂ ಘಟಮುದಿತ ಮಹಾಭೂತಕಂ ರತ್ನಧೇನುಂ
ಸಪ್ತಾಂಭೋದೀಶ್ಚ ಕಲ್ಪಕ್ಷಿತಿರುಹಫಲಕೇ ಕಾಂಚನೀಂ ಕಾಮಧೇನುಂ |
ಸ್ವರ್ಣಷ್ಮಾಂಯೋ ಹಿರಣ್ಯಾಶ್ವರಥ ಮಪಿತುಲಾ ಪೂರುಷಂಗೋ
ಸಹಸ್ರಂ ಹೇಮಾಸ್ತ್ರಂ ಹೇಮಗರ್ಭಂ ಕನಕಗಿರಿರಥಂ ಪಂಚಲಾಂ
ಗೂಲ್ಕತಾನೀತ್ || ರಾಜ್ಯಂ ಪ್ರಶಾಸ್ಯ ನಿರ್ವಿಘ್ನಂ ರಾಜ್ಯಂದ್ರಾಮಿವ
ಶಾಸಿತುಂ | ತಸ್ಮಿನ್ಗುಣೇನ ವಿಖ್ಯಾತೇ ಕ್ಷಿತೇರಿಂದ್ರೇ ದಿವಂಗತೇ |
ತತೋಪ್ಯವಾರ್ಯ ವೀರ ಶ್ರೀಃ ಕೃಷ್ಣರಾಯಮಹೀಪತಿಃ | ಬಿಭರ್ತಿಮಣಿ
ಕೇಯೂರ ನಿರ್ವಿಶೇಷಂ ಮಹೀಭುಜೇ || ಕೀರ್ತ್ಯಾಯಸ್ಯ ಸಮಂತತಃ
ಪ್ರಸೃತಯಾ ವಿಶ್ವಂ ರುಚೈಕ್ಯಂ ವ್ರಜೇದಿತ್ಯಾಲಕ್ಷ್ಯಪುರಾಪುರಾರಿ ಭವತ್ಪಾ
ಲೋಕನಃ ಪ್ರಾಯಶಃ | ಪದ್ಮಾಕ್ಷ್ಯೋತಿ ಚತುರ್ಭುಜೋಜನಿ ಚತುರ್ವಕ್ತ್ರೋ
ಭವತ್ಪದ್ಮಭೂಃ | ಕಾಳೀಖಡ್ಗಮಧಾದ್ರಮಾಚ ಕಮಲಂ ವೀಣಾಂಚವಾಣೀ
ಕರೇ|| ಶತ್ರೂಣಾಂ ವಾಸಮೇತೇವದತ ಇತಿ ರುಷಾಕಿನ್ನು ಸಪ್ತಾಂಬುರಾಶೀಂ
ನಾನಾ ಸೇನಾತುರಂಗತ್ರುಟಿತ ವಸುಮತೀಧೂಳಿಕಾ ಪಾಳಿಕಾಭಿಃ | ಸಂಶೋ
ಷ್ಯಸ್ವೈರಮೇತ ಕ್ಷಿತಿನಿಧಿ ಜಲಧಿ ಶ್ರೇಣಿಕಾಂ ಯೋ ವಿಧತ್ತೇ | ಬ್ರಹ್ಮಾಂಡ
ಸ್ವರ್ಣಮೇರು ಪ್ರಮುಖ ನಿಜಮಹಾದಾನತೋಯೈರಮೇಯೈಃ ||
ಮದ್ದತ್ತಾಮರ್ಥಿಸಾರ್ಥಃ ಶ್ರೀಯಮಿಹ ಸುಚಿರಂ ಭುಜ್ಯತಾಮಿತ್ಯಲಕ್ಷ್ಯ |
ಪ್ರಾಯಪ್ರತ್ಯೂಹ ಹೇತೋಃ ತಪನರಥ ಗತೇ ರಾಲಯಂ ದೇವತಾನಾಂ ||
ತತ್ತಾದ್ದಿಗ್ಜೈತ್ರ ವೃತ್ತ್ಯಾಪಿಚ ಬಿರುದ ಪದ್ಮೈರಂಕಿತಾಃ ತತ್ರತತ್ರೈಸ್ತಂ
ಭಾಃ | ಪ್ರತಿಷ್ಠಾನ್ಯಕೃತನುತ ಭುವಿಯೋ ಭೂಭೃದಭ್ರಕಷಾಗ್ರಾಃ |
ಕಾಂಚೀ ಶ್ರೀಶೈಲಶೋಣಾಚಲ ಕನಕಸಭಾ ವೆಂಕಟಾದ್ರಿ ಪ್ರಮುಖ್ಯೇ ಷ್ವೇತೇ
ಷ್ವಾಹತ್ಯ ಸರ್ವೇಷ್ವತನುತ ವಿಧಿವದ್ಭೂಯಸೇ ಶ್ರೇಯಸೇಯ ಃ ||

ದೇವಸ್ಥಾನೇಷು ತೀರ್ಥೇಷ್ವಪಿ ಕನಕತುಲಾಪೂರುಷಾದೀನಿ ನಾನಾ
ದಾನಾನ್ಯನ್ಯೇ ಸೋಪಧಾನ್ಯೈರಪಿ ಸಮುಪಚಿತೈರಾಗ ಮೋಕ್ತಾನಿತಾನಿ ||
ದ್ರೋಹಕೃತಪ್ರತಿಪಾರ್ಥಿವ ದಂಡಃ ಶೇಷಭುಜಕ್ಷಿತಿ ರಕ್ಷಣಕಾಂಡಃ |
ಭಾಷೆಗೆ ತಪ್ಪುವ ರಾಯರ ಗಂಡಃ ತೋಷಕೃತಾರ್ಥಿಷು ಯೋ ರಕ್ಷಣದಂಡಃ ||
ರಾಜಾಧಿರಾಜ ಇತ್ಯುಕ್ತ್ಯೋಯೋ ರಾಜಪರಮೇಶ್ವರಃ | ಮೂರು ರಾಯರ
ಯುಪ್ಪಾಂಕಃ ಪರರಾಯ ಭಯಂಕರಃ || ಸಿಂಧುರಾಯ ಸುರತ್ರಾ
ಣೊಂದುಷ್ಟಶಾರ್ದೂಲ ಮರ್ದನಃ | ವೀರಪ್ರತಾಪ ಇತ್ಯಾದಿ ಬಿರುದೈ
ರುಚಿತೈರ್ಯುತಃ || ಆಲೋಕಯ ಮಹಾರಾಜ ಜಯತ್ವಿತ್ಯೇವವಾದಿ
ಭಿಃ ಸಮುಸೇತೋಃ ಕಳಿಂಗರಾಧ್ಯೈಃ ರಾಜಭಿಸ್ಸೇವ್ಯತೇ ಜಯಃ |
ಸ್ತುತ್ಯೋದಯಾರ್ಶಂಶಧೀಭಿಸ್ಸ ವಿಜಯನಗರೇ ರತ್ನ ಸಿಂಹಾಸನ
ಸ್ಥಃ ಷ್ಯಾರ್ಕ ಪಾರ್ಲ | **ಕೃಷ್ಣರಾಯಕ್ಷಿತಿಪತಿರಧರೀ ಕೃತ್ಯನೃಗಾರೀ |**
ಅಪೂರ್ವಾದ್ರೇರಧಾಸ್ತ ಕ್ಷಿತಿಧರಕಟಕಾದಾಚ ಹೇಮಾಚಲಾಂ
ತಾದಾಸೇತೋರರ್ಥಿತಾರ್ಥ ಶ್ರಿಯಮಿವ ಬಹುಳೀಕೃತ್ಯಕೀರ್ತ್ಯಾ
ಸಮಂಧೇ || ಶಾಲಿವಾಹನ ನಿರ್ಣೀತ ಶಕಾಬ್ದೇ ಸಚಿತುಶ್ಶತರ ಅಷ್ಟ
ತ್ರಿಂಶಸಮಾಯುಕ್ತೇ ಸಂಖ್ಯಾತೆ ದಶಭಿಶ್ಶತೈಃ | ಧಾತುಸಂವತ್ಸರೇ
ಮಾಸಿಕಾರ್ತಿಕೆ ಪೂರ್ಣಿಮಾತಿಥೌ || ತುಂಗಭದ್ರಾಪಗಾತೀರೇ ವಿಟ್ಠಲೇಶ್ವ
ರಸನ್ನಿಧೌ | ಘೃತಪರ್ವತದಾನಸ್ಯ ಸಮಯೋ ಭಾನುವಾಸರೇ || **ಶ್ರೀ ಭಾರ
ದ್ವಾಜ ಗೋತ್ರಾಯವರಾಪಸ್ತಂಭಸೂತ್ರಿಣೇ | ಯಶಸ್ವಿನೇ
ಯಜುಶ್ಯಾಖಾ
ಧ್ಯಾಯನೇ ಗುಣಶಾಲಿನೇ || ಅನ್ವಿಷ್ಯವೆಂಕಟೇಶೇನ ವಿತೀರ್ಣ
ಕುಸುಮ
ಸ್ರಜೆ | ಅನಂತಾಚಾರ್ಯವರ್ಯಸ್ಯ ವಂಶವಾರಾಕರೇಂದವೇ |
ಪ್ರತಿಷ್ಠೋ**
ಭಯವೇದಾಂತ ತಂತ್ರವ್ಯಾಖ್ಯಾನಪಟೀಯಸೇ|| ವಿಶಿಷ್ಟಾಚಾರ್ಯವೇಷಾಯ
ಶೇಷಾಯ ವಿದುಷಾಂಮುದೇ|| ಪದವಾಕ್ಯಪ್ರಮಾಣೇಷುಪರಾಂ ಪೌಢಿಮುಪೆ
ಯುಷೇ || ವ್ಯಾಖ್ಯಾತಾಖಿಲ ಶಾಸ್ತ್ರಾಯ ಪ್ರಖ್ಯಾತ ಗುಣಸಂಪದೇ |

ವರದಾಚಾರ್ಯವರಸ್ಯ ಸೂನವೇ ಸೂನೃತೋಕ್ತಯೇ ॥ ಗೋವಿಂದ ರಾಜ
ಗುರುವೇ ತರವೇ ಸುಧಿಯಾಂಧಿವಃ । ತಾದೃಶೇ ಹೋಸಳೇದೇಶೇ ವಿಖ್ಯಾತ
ಸ್ಯಧಿಕಶ್ರುತಂ ॥ ಶ್ರೀರಂಗಪಟ್ಟಣಸ್ಯಾಪಿ ಸಮಾಯಾಪಿ ಹಿತಂ ಸ್ಥಿತಂ।
ಕೃಷ್ಣರಾಯಪುರಂಚೇತಿ ಪ್ರತಿನಾಮೋಪಶೋಭಿತಂ । ದಕ್ಷಿಣೇ ಹುಲಿವಾನಾ
ಜ್ಞ ಸಾತನೂರೇ ಶ್ಚ ತಿವಿತಂ । ಗ್ರಾಮಾಜ್ಞ ಗುತ್ತಲಾಹ್ವಾನಾ ತ್ಪಶ್ಚಿಮಾ
ಯಾಂ ದಿಶಿಸ್ಥಿತಂ । ಗ್ರಾಮಾಜ್ಞ ರಾಮಹಳ್ಳೀಯಾ ಉತ್ತರಾಯಾಂ ದಿಶಿ
ಸ್ಥಿತಂ । ಚಿಕ್ಕ ಮಂಡೀಯ ಯುಕ್ತಂಚ ಕಳ್ಳಹಳ್ಳಿ ಸಮನ್ವಿತಂ । ಸಂಯುಕ್ತಂ
ಹೊಸಹಳ್ಳ್ಯಾಚ ತಂಡಸೇ ಹಳ್ಳಿ ಸಂಶ್ರಿತಂ । ಕೊಣಹಳ್ಳಿ ಸಮಾ ಯುಕ್ತಂ
ಗ್ರಾಮಂ ಮಂಡಯ ನಾಮಕಂ । ಸರ್ವಮಾನ್ಯಂ ಚತುಸ್ಸೀಮಾ ಸಂಯುಕ್ತಂ
ಚಾಸಮಂಕಕಃ ॥ ನಿಧಿನಿಷೇಪ ಪಾಷಾಣ ಸಿದ್ಧ ಸಾಧ್ಯ ಜಲನ್ವಿತಂ।
ಅಕ್ಷಿಣ್ಯಾಗಾಮಿ ಸಂಯುಕ್ತಮೇಕ ಭೋಗ್ಯಂ ಸಭೂರುಹಂ॥
ವಾಪೀಕೂಪ ತಟಾಕೈಶ್ಚ ಕಚ್ಛಾಣಪಿ ಸಮನ್ವಿತಂ ॥ ಪುತ್ರಪೌತ್ರಾದಿಭಿ
ಭೋಜ್ಯಂ ಕ್ರಮದಾಚಂದ್ರ ತಾರಕಂ ॥ ದಾನಸ್ಯ ವಿನಯಸ್ಯಾಪಿ
ವಿಕ್ರಯಸ್ಯಾಪಿಚೋಚಿತಂ । ಪರಿತಃ ಪ್ರಯತ್ನೈಸ್ಸಿಗ್ದೇಃ ಪುರೋಹಿತ
ಪುರೋಗಮ್ಯೈಃ ॥ ವಿವಿಧೈರ್ವಿಬುಧೈಶ್ಶ್ರೋತೃಪಂಡಿತೈಃ ಪಥಿಕೈರ್ಯ್ಯತಃ ।
ಕೃಷ್ಣರಾಯೋ ಮಹಾದೇವೋ ಮಹಾರಾಯೋ ಮನಸ್ವಿನಾಂ ॥ ಸಹಿರಣ್ಯಾ
ಪಯೋಧಾರಾಪೂರ್ವಕಂ ದತ್ತವಾನ್ಮುದಾ । ತೈಸ್ತೈಸಮನ್ವಿತಶ್ಚಿನ್ಹೈಃ
ದಿಕ್ಷುಪ್ರಾಚ್ಯಾದಿಷು ಕ್ರಮಾತ್ ॥ ಸಾಮಾನ್ಯಾಸ್ಯಾಗ್ರಹಾರಸ್ಯ
ಲಿಖ್ಯಂತೇ ದೇಶಭಾಷೆಯಾ ॥

**ವಿವರಣೆ**—ಈ ಶಾಸನದ ಕಾಲವು ಕ್ರಿ. ಶ. 1516. ವಿಜಯನಗರಾಧಿಪತಿ ಶ್ರೀ ಕೃಷ್ಣರಾಯ ಮಹಾರಾಯನು ಶ್ರೀ|| ಉ|| ಅನನ್ತಾರ್ಯವರ್ಯರ ವಂಶಸ್ಥರಾದ ಶ್ರೀ|| ಉ|| ಗೋವಿಂದರಾಜ ಉಡೈಯರವರಿಗೆ "ಚಿಕ್ಕಮಂಡೀಯ, ಕಲ್ಲಹಳ್ಳಿ, ಹೊಸಹಳ್ಳಿ, ತಂಡಸೇಹಳ್ಳಿ, ಕೋಣಹಳ್ಳಿ, ಮಂಡಯ" ಈ ಗ್ರಾಮಗಳನ್ನು ಕೃಷ್ಣರಾಯಪುರವೆಂಬ ಪ್ರತಿನಾಮದಿಂದ ದಾನ ಮಾಡಿದನು. ಅಂದರೆ 'ಮಂಡಯ,' 'ಚಿಕ್ಕಮಂಡೀಯ' ಎಂಬ ಹೆಸರುಗಳು ಕ್ರಿ. ಶ. 1516ಕ್ಕೆ ಹಿಂದೆಯೇ ಇದ್ದಿವೆ ಎಂದಾಯಿತು. ಎಲ್ಲೆಗಳನ್ನು ಹೇಳಿದೆ.

# *Epigraphica Carnatica*

## ಚನ್ನಪಟ್ಟಣದ ತಾಲ್ಲೂಕು ೧೮೬ನೇ ನಂಬರ್ ಶಾಸನ

ಚನ್ನಪಟ್ಟಣದ ತಾಲ್ಲೂಕು ಮಳೂರು ಹೋಬಳಿ ಕಸಬಾ
ಆಜಿ ಸಿಂಗ್ರಾಚಾರ್ಯರಲ್ಲಿದ್ದ ತಾಮ್ರ ಶಾಸನ
ನಾಗರಾಕ್ಷರ ೫ ಪತ್ರಗಳು

ಶ್ರೀ ಗಣಾಧಿಪತಯೇನಮಃ—ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ | ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ||
ಹರೇರ್ಲೀಲಾವರಾಹಸ್ಯ ದಂಷ್ಟ್ರಾದಣ್ಡಸ್ಸಪಾತವಃ | ಹೇಮಾದ್ರಿಕಲಶಾ ಯತ್ರ ಧಾತ್ರಿಚ್ಛತ್ರಶ್ರೀಯಂ ದಧೌ | ಕಲ್ಯಾಣಾಯಾಸ್ತು ತದ್ಧಾಮ ಪ್ರತ್ಯೂಹ ತಿಮಿರಾಪಹಂ | ಯದ್ಗಜಾಪ್ಯ ಗಜೋದ್ಭೂತಂ ಹರಿಣಾಪಿಚ ಪೂಜ್ಯತೇ | ಅಸ್ತಿಕ್ಷರ ಮಯಾದ್ದೇವೈಃ ಮಥ್ಯಮಾನಾನ್ಮಹಾಂಬುಧೇಃ | ನವನೀತಮಿಮೋದ್ಭೂತಂ ಅಪನೀತ ತಮೋಮಹಃ|ತಸ್ಯಾಸೀತ್ತನಯಸ್ತಪೋಬಿರತುಳ್ಯೈರನ್ವರ್ಥನಾಮಾಬುಧಃ | ಪುಣ್ಯೈರಸ್ಯ ಪುರೂರವಾ ಭುಜಬಲೈ ರಾಯುರ್ದ್ವಿಷಾಂನಿಘ್ನತಃ | ತಸ್ಯಾಯುರ್ನಹುಷೋಸ್ಯ ತಸ್ಯಪುರುಷೋ ಯುವ್ವೆಯಯಾತಿ ಕ್ಷಿತೌಖ್ಯಾತ ತುರ್ವಸುರ್ವಸುನಿಭಃ ಶ್ರೀದೇವಯಾನೀಪತೇಃ ತದ್ವಂಶೇ ದೇವಕೀಜಾನಿಃರ್ದಿದೀಪೇ ತಿಮ್ಮಭೂಪತಿಃ | ಯಶಸ್ವೀ

ತುಳುವೇಂದ್ರೇಷು

ಯಥೋಽಕೃಷ್ಣ ಇವಾನ್ವಯೇತತೋಽಭೂದ್ಭುಕ್ಕಮಾ ಜಾನಿರೀಶ್ವರಕ್ಷಿತಿಪಾಲಕಃ|
ಅತ್ರಾ ಸಮಗುಣಭ್ರಂಶಂ ಮೌಳಿರತ್ನಂ ಮಹೀಭುಜಾಂ || ಸರಸಾದುದ
ಭೂತ್ತಸ್ಮಾ
ನ್ನರಸಾವನಿಪಾಲಿಕಃ | ದೇವಕೀನಂದನಾತ್ಮಾವೋ ದೇವಕೀನಂದನಾದಿವ |

..............................................................................................

..............................................................................................

..............................................................................................

..............................................................................................

..............................................................................................

..............................................................................................

..............................................................................................

..............................................................................................

..............................................................................................

..............................................................................................

..............................................................................................

**ಸದಾಶಿವ ಮಹಾರಾಯ ಕ್ಷಮಾನಾಯಕಃ |** ಬಾಹಾವಂಗದೀ ನಿರ್ವಿಶೇಷ
ಮಖಿಳಾಂ ಸರ್ವಾಂ ಸಹಾ ಮುದ್ವಹನ್ವಿದ್ವತ್ರಾಣ ಪರಾಯಣೋ
ವಿಜಯತೇ ವೀರ
ಪ್ರತಾಪೋನ್ನತಃ | ಅವತಾರಹಯಾಬ್ಧೀಂದುಗಣಿತೇ ರೀಕವತ್ಸರೇ--
ವತ್ಸರೇ ಕಾಲಯುಕ್ತ್ಯಾಖ್ಯಾ ಮಾಸಿಚಾ(ಷಾ)ಡನಾಮನಿ | ಪಕ್ಷೆವಳಕ್ಷೆ
ಪುಣ್ಯಾಯಾಂ

ಪ್ರಥಮದ್ವಾದಶೀ ತಿಥೌ | ತುಂಗಭದ್ರಾನದೀತೀರೇ ವಿಠಲೇಶ್ವರಸನ್ನಿಧೌ |
ಭಾರದ್ವಾಜಾ
ಸ್ವಯಾಂಭೋದಿ ಪಾರಿಜಾತಾಯಿತಾತ್ಮನೇ| ವರ್ಣನಾತೀತ ಶೀಲಾಯ
ಪರಾಪಸ್ತಂಭಸೂತ್ರಿಣೇ | ಯಶಸ್ವಿನೇ ಯಜುಶ್ಶಾಖಾಧ್ಯಾಯಿನೇ
ಭೀಷ್ಟದಾಯಿನೇ |
ಪ್ರಪೆಮಷೇ ವೇದಮಾರ್ಗಪ್ರತಿಷ್ಠಾಚಾರ್ಯ ಪರ್ಯತಾಂ| ಪ್ರಖ್ಯಾತೋ
ಭಯವೇದಾಂತಾಚಾರ್ಯವರ್ಯಾಯ ಭೂಷ್ಣವೇ| ಶ್ರೀಭಾಷಾಪದಸಿದ್ಧಾಂತ
ವೆದಿನೇ ಜಿತವಾದಿನೇ| ವ್ಯಷ್ಟಾಂನ ತರ್ಪಿತಾನೇಕ ಶಿಷ್ಟಾಚಾರ ದ್ವಿಜನ್ಮನೇ |
ಅಷ್ಟಾದಶ ಪುರಾಣಾರ್ಥ ಹೃಷ್ಟಾಶಯ ಸರೋರುಹೇ| ಸಂಭೃತಾಶೇಷ
ಸುರಭಿಚಸ್ತಿ ಪ್ರಜಶೋಭಿನೇ| ಸಚಕ್ರಾನಂದ ಕಾಯತ್ರೀ ಸಹಾಯಾಪರ
ಮೂರ್ತಯೇ | ಕಾವ್ಯೇ ಶ್ರಾವ್ಯೇ ನವರಸೋತ್ಪಾಟಕೇ ನಾಟಕೇಪಿಚ| ಗದ್ಯೇ
ಹೃದ್ಯೇ ಸ್ಮೃತೌಚಾಪಿ ಗಾಥಾಂ ಪ್ರೌಢಿಮುಪೇಯುಷೇ| **ಅನಂತಾರ್ಯ**
**ಕುಲಾಂಭೋಜರವಯೇ ಪುಣ್ಯಕೀರ್ತಯೇ| ತಿರುವೆಂಕಟಾಚಾರ್ಯ**
**ಪೌತ್ರಾ**
**ಯ ಪತಮಾಜಸೇ | ಶ್ರೀಮದಂವರಮಾಚಾರ್ಯ ಚಿರಪುಣ್ಯ**
**ಫಲಾತ್ಮನೇ**
**ತಿರುವೆಂಕಟೆಯಾಚಾರ್ಯ ಶೇಖರಾಯ ಮಹಾತ್ಮನೇ |**
**ಚನ್ನಪಟ್ಟಣ**
**ಸೀಮಾಸ್ತಂ ಕೈಲನಾಡೌ ಕೃತಸ್ಥಿತಿಂ | ತಿಂಬೂರುಗ್ರಾಮಕಾತ್ಪ್ರಾಚ್ಯ**
**ಮಾಗ್ನೇ**
**ಯಿಾಂ ನಿಡಗಟ್ಟಿತಃ | ಮಾದಿಹಳ್ಯಾಹ್ವಯ ಗ್ರಾಮಾ ದಕ್ಷಿಣ**
**ಸ್ಯಾಂ ದಿಶಿ ಸ್ಥಿತಂ**
ಗ್ರಾಮಾದ್ಬೈಲಗರಾಭಿಖ್ಯಾಂ ನೈರುತೀ ಮಾಶ್ರಿತಾಂ ದಿಶಂ | ಸಂಪ್ರಾಪ್ತಿ
ಮಾಶಾಂ ಕುರುಣಿಗರ ಕೈಲಾಚ್ಚ ಪಶ್ಚಿಮಾಂ |.
ಕುಕ್ಕುಪರಿತಿವಿಖ್ಯಾತಾದ್ವಾಯವ್ಯಾಂ ಗ್ರಾಮಕಾದಪಿ| ಶ್ರೀಮತ್ಸದ್ಧಯದೇ
ವಾಪ್ರೇರುತ್ತರಾಮಾಶ್ರಿತಂ ದಿಶಂ | ಮಾದಿನಾಯಕಹಳ್ಯಾಖ್ಯಾದೈಶಾನ್ಯ

ಗ್ರಾಮಕಾದಪಿ | **ಕೊಂಡರಾಜಪುರಂಚೇತಿ ಪ್ರತಿನಾಮ ಸಮೊಶ್ರಿತಂ |**
**ಗ್ರಾಮಂ ಮಾಚೇನಹಳ್ಳ್ಯಾಖ್ಯಂ** ಸರ್ವಸಸ್ಯೋಪ ಶೋಭಿತಂ |
ಸರ್ವಮಾನ್ಯಂ

ಚತುಸ್ಸೀಮಾ ಸಂಯುತಂ ಚ ಸಮಂತತಃ |ನಿಧಿನಿಕ್ಷೇಪಪಾಷಾಣ
ಸಿದ್ಧಸಾಧ್ಯಜಲಾನ್ವಿತಂ | ಅ ಕ್ಷಿಣ್ಯಾಗಾಮಿಸಂಯುಕ್ತಮೇ ಕಭೋ
ಗ್ಯಂ ಸಭೂರುಹಂ | ವಾಪಿಕೂಪತಟಾಕೈಶ್ಚ ಕಚ್ಛರಾಮೈಶ್ಚ
ಸಂಯುತಂ | ಪುತ್ರಪೌತ್ರಾದಿಭಿರ್ಭೋಗ್ಯಂ ಕ್ರಮಾದಾಚಂದ್ರಾತಾ
ರಕಂ | ದಾನಾದಮನ ವಿಕ್ರೀತಿಯೋಗ್ಯಂ ವಿನಿಮಯೋಚಿತಂ | ಶೀತಾಂ
ಶೋ ವಂಶರತ್ನಂ ಸಮಜನಿನಂದನಾಮಥಜಜ್ಞೇ ತತ್ಸಂತತ್ಯಾಂಚಲಿಕ್ಕ
ಕ್ಷಿತಿಪತಿರುದಭೂತ್ತತ್ಕುಲೇ ಬಿಜ್ಜಲೇಂದ್ರಃ | ಕ್ಷದ್ವಂಶಂ ಸೋವಿ
ದೇವೋಲಮಕೃತ ವಿಮತಾತ್ಸಪ್ತ ದುರ್ಗಾಣಿಹೃತ್ವಾ ಪ್ರಾಪ್ತಸ್ಯಾರವೀಟಿ
ಪುರಪತಿ ರಭವಲ್ಪೆಂ ನಮಕ್ಷೋಣಿಪಾಲಃ |

..................................................................................

..................................................................................

..................................................................................

..................................................................................

..................................................................................

..................................................................................

ವರ ಶ್ರೀರಾಮರಾಜಸ್ಯ ವಿಜ್ಞಪ್ತಿ ಮನುಪಾಲಯನ್ | ತಠೀತಃ ಪ್ರ
ಯತ್ನೈಃ| ಸ್ನಿಗ್ಧೈಃ ಪುರೋಹಿತ ಪುರೋಗಮೈಃ | ವಿವಿಧೈರ್ವಿಬುಧೈ
ಶ್ರೌತಪಥಿಕೈರ್ಗಿರಾ | ಸದಾಶಿವ ಮಹಾರಾಯೋ ಮಾನನೀಯೋ
ಮನಸ್ವಿನಾಂ | ಸಹಿರಣ್ಯ ಪಯೋಧಾರಾಪೂರ್ವಕಂ ದತ್ತವಾನ್ಮುದಾ |

...........................................  ...........................................

..........................................................................................

..........................................................................................

..........................................................................................

ಸರಸಸದಾಶಿವರಾಯಕ್ಷಿತಿಪತಿವರ್ಯಸ್ಯ ಕೀರ್ತಿಧುರ್ಯಸ್ಯ ಸಾಸನ
ಮಿದಂ ಶರಾಸನದಾಶರಥೇರಮಿತ ಹೇಮದಾನರತೇಃ | ಮೃದುಪದಮಿತಿ
ತಾಮ್ರಶಾಸನಾರ್ಥಂ ಮಹಿತಸದಾಶಿವರಾಯಶಾಸನೇನ| ಆಭಾಣದನುಗುಣಾ
ವಚೋವಮಹಿಮ್ನಾ ಸರಸತರೇಣ ಸಭಾಪತಿಸ್ಸ್ವಯಂಭೂಃ ಸದಾಶಿವ ಮಹಾ
ರಾಯ ಶಾಸನಾದ್ವೀರಣಾತ್ಮಜಃ | ತ್ವಷ್ಟಾ ಶ್ರೀವೀರಣಾಚಾರ್ಯೋವ್ಯಲಿಖ
ತ್ತಾಂಮ್ರಶಾಸನಂ | ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನು
ಪಾಲನಂ | ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ |
ಸ್ವದತ್ತಾದ್ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ | ಪರದತ್ತಾ
ಪಹಾರೇಣ ಸ್ವದತ್ತಂ
ನಿಷ್ಫಲಂ ಭವೇತ್ | ಸ್ವದತ್ತಾಂ ಪರದತ್ತಾಂ ವಾಯೋಹರೇತವಸುಂಧರಾಂ |
ಷಷ್ಟಿರ್ವರುಷ ಸಹಸ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿಃ | ಏಕೈವ
ಭಗಿನೀಲೋಕೇ ಸರ್ವೇಷಾಮೇವ ಭೂಭುಜಾಂ | ನ ಭೋಜ್ಯಾ ನ ಕರಗ್ರಾ
ಹ್ಯಾ ವಿಪ್ರದತ್ತಾ ವಸುಂಧರಾ | ಸಾಮಾನ್ಯೋಯಂ ಧರ್ಮಸೇತುರ್ನೃಪಾ
ಣಾಂ ಕಾಲೇಕಾಲೇ ಪಾಲನೀಯೋ ಭವದ್ಭಿಸ್ಸರ್ವಾನೇತಾನ್ ಭಾವಿನಃ |
ಪಾರ್ಥಿವೇಂದ್ರಾನ್ ಭೂಯೋ ಭೂಯೋ ಯಾಚತೇ
ರಾಮಚಂದ್ರಃ | ಶ್ರೀ

**ಶ್ರೀ ವಿರೂಪಾಕ್ಷ** (ಕನ್ನಡಾಕ್ಷರದಲ್ಲಿದೆ)

**ವಿವರಣೆ**—ಈ ಶಾಸನದ ಕಾಲವು ಕ್ರಿ. ಶ. 1558. ವಿಜಯನಗರಾಧಿಪತಿ ಶ್ರೀ ಸದಾಶಿವ ಮಹಾರಾಯನು ಶ್ರೀಮದನನ್ತಾಚಾರ್ಯರವರ ವಂಶಸ್ಥರಾದ ಶ್ರೀ|| ಉ|| ವರದಾಚಾರ್ಯರ ಪುತ್ರರಾದ ಶ್ರೀ|| ಉ|| ವೆಂಕಟಾಚಾರ್ಯರವರಿಗೆ (ಶ್ರೀ|| ಉ|| ಅಪ್ಪಯ್ಯಾಚಾರ್ಯರು ಅಥವಾ ಶ್ರೀ|| ಉ|| ಶ್ರೀನಿವಾಸಾಚಾರ್ಯರು) ಕೊಂಡರಾಜಪುರವೆಂಬ ಪ್ರತಿನಾಮದ 'ಮಾಚೇನ ಹಳ್ಳಿ'ಯನ್ನು ದಾನ ಮಾಡಿದನು. ಇದೇ ನಮ್ಮ 'ರಾಮಾನುಜಪುರ'ವು. ಎಲ್ಲೆಗಳನ್ನು ಹೇಳಿದೆ.

## Extract From "The Mysore Pradhans"

(Abstract translation of a copy of a Kannada letter dated the 25th June 1799 from Maharanee Lakshmammanny to Lords Clive and Mornington—pp 45-46.)

"You have already been made aware of all our affairs through our Pradhan Tirumal Row XXXXXXXXXXXXX XXXXXXXXXXXXXXXXXXXXXXXXXXXXXXXXX And hence as you have been good enough to restore to us our Kingdom, please to allow us also to administer it in the manner that suits us best. **We have already promised this our Tirumal Row, to appoint him and his heirs as our ministers in hereditary succession, to grant him 10 percent of the revenues of the State, and also to pay up all his expenses.** It is therefore our request that you will be pleased to permit us to keep our promise."

8, Bahula Jyeshta (Sd) Sreeranga.
Siddharti

**ವಿವರಣೆ**—ಇದು ಶ್ರೀಮನ್ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಲಾರ್ಡ್ ಕ್ಲೈವ್ ಮತ್ತು ಮಾರ್ನಿಂಗ್‌ಟನ್‌ರವರಿಗೆ ಬರೆಸಿದ ಕನ್ನಡ ಕಾಗದದ ಸಾರಾಂಶ. ಕಾಲ 25–6–1799. ಪ್ರಧಾನ್ ತಿರುಮಲರಾಯರನ್ನೂ ಅವರ ವಂಶಪರಂಪರೆಯವರನ್ನೂ ಮೈಸೂರು ರಾಜ್ಯದ ಮಂತ್ರಿಗಳಾಗಿ ನಡೆಯಿಸಿಕೊಂಡು ಬರುವಂತೆಯೂ, ಸಂಸ್ಥಾನದ ಹುಟ್ಟುವಳಿಯಲ್ಲಿ ಹತ್ತರಲ್ಲಿ ಒಂದು ಭಾಗವನ್ನು ಇವರಿಗೆ ಕೊಡುತ್ತಿರಬೇಕೆಂದೂ, ಮತ್ತು ಅವರ ಖರ್ಚನ್ನೆಲ್ಲಾ ಕೊಡಿಸುವಂತೆಯೂ, ಶ್ರೀಮನ್ಮಹಾರಾಣಿಯವರಿಂದ ವಾಗ್ದಾನವಾಗಿದ್ದುದು ತಿಳಿಯಬರುತ್ತದೆ.

# *Epigraphica Carnataca*

## ಮಂಡ್ಯ ತಾಲ್ಲೂಕು ೬೩ನೇ ನಂಬರ್ ಶಾಸನ

### ಮಂಡ್ಯಕ್ಕೆ ಪೂರ್ವ ದಿಕ್ಕಿನಲ್ಲಿ ತಿರುಮಲಾಚಾರ್ಯರ ಕೊಳದ ಆಗ್ನೇಯ ಮೂಲೆಯಲ್ಲಿ

ಗ್ರಂಥ ಮತ್ತು ಅರವಾಕ್ಷರ:—ಪ್ರಮಾಣ *1′–2″ × 1′-6′*

ಶುಭಮಸ್ತು||

ಶ್ರೀ ಲಿಪ್ಯಖಿ ಶಕಾಬ್ದೇ ಗತವತಿ ಮಹಿತೇ ವತ್ಸರೇ ವೇವ ಸಂಜ್ಞೇ ||
ವಿಶಾಖೇ ಕೃಷ್ಣ ಪಂಚಮ್ಯಾಧಿಬುಧದಿವಸೇ ಚೋತ್ತರಾಷಾಢ ತಾರೇ ||
ಗೋವಿಂದಾರ್ಯಸ್ಯ ಸೂನುರ್ವ್ಯತನುತ ಸಚಿವಾಧೀಶ್ವರೋ ರಂಗಪುರ್ಯಾ |
ಶ್ರೀಶೈಲಾರ್ಯೋ ಗುಣಾಬ್ಧಿ ಸ್ವಪಿತುರ್ ಅಭಿಧಯೋದ್ಯಾನಕಾಸಾರಯುಗ್ಮಂ||

**ವಿವರಣೆ**—ಈ ಶಾಸನದ ಕಾಲವು ಕ್ರಿ. ಶ. 1810. ಮಂಡಯುದ ಪೂರ್ವದಿಕ್ಕಿನ ತಿರುಮಲಾಚಾರ್ಯರ ಕೊಳದ ನಾಲ್ಕು ಮೂಲೆಗಳಲ್ಲಿರುವ ನಾಲ್ಕು ಶಾಸನಗಳು ಮಂಡಯುದ ನಂ. 63, 64, 65, ಮತ್ತು 66 ಆಗಿ ಮುದ್ರಿಸಲ್ಪಟ್ಟಿವೆ. ಕೊಳವನ್ನೂ ತೋಪನ್ನೂ ಶ್ರೀ. ಉ|| ಪ್ರಧಾನ್ ತಿರುಮಲಾಚಾರ್ಯರು ತಮ್ಮ ತಂದೆ ಪ್ರಧಾನ್ ಗೋವಿಂದರಾಜಯ್ಯನವರ ಹೆಸರಿನಲ್ಲಿ ನಿರ್ಮಿಸಿದ್ದು. ಕೊಳಕ್ಕೆ 'ಗೋವಿಂದರಾಜ ಪುಷ್ಕರಿಣಿ' ಎಂದೂ, ತೋಪಿಗೆ 'ಗೋವಿಂದ ರಾಜೋದ್ಯಾನ'ವೆಂದೂ ಹೆಸರಿಟ್ಟರು.

## EPIGRAPHICA CARNATACA

# ಮಂಡ್ಯ ತಾಲ್ಲೂಕು ೬೪ನೇ ನಂಬರ್ ಶಾಸನ

### ಮಂಡ್ಯಕ್ಕೆ ಪೂರ್ವ ದಿಕ್ಕಿನಲ್ಲಿ ತಿರುಮಲಾಚಾರ್ಯರ ಕೊಳದ ನೈರುತ್ಯ ಮೂಲೆಯಲ್ಲಿ

ಪ್ರಮಾಣ:— *1′ — 2″ × 1′ — 6″*

ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ 1732 ಸಂದ ವರ್ತಮಾನ ಪ್ರಮೋದೂತ ಸಂವತ್ಸರದ ವೈಶಾಖ ಬಹುಳ 5 ಬುಧವಾರ ಉತ್ರಾಷಾಢ ನಕ್ಷತ್ರದಲ್ಲಿ ಶ್ರೀರಂಗಪಟ್ಟಣದ ತಿರುಮಲೆ ಆನಂದಾಂಪಿಳ್ಳೆ ಗೋವಿಂದರಾಜರಕುಮಾರರು ತಿರುಮಲಾಚಾರ್ಯರ ಧರ್ಮ॥ ಯಿಾ ಸರಸ್ಸು ಗೋವಿಂದರಾಜ ಪ್ರ..............................ಯಿಾ ತೋಪು ಗೋವಿಂದ ರಾಜೋದ್ಯಾನ |

**ವಿವರಣೆ—** ಹಿಂದಣ ನಂಬರ್ 63 ಶಾಸನದಂತೆಯೇ.

## EPIGRAPHICA CARNATACA

# ಮಂಡ್ಯ ತಾಲ್ಲೂಕು ೬೫-೬೬ನೇ ನಂಬರ್ ಶಾಸನ

### ಮಂಡ್ಯಕ್ಕೆ ಪೂರ್ವ ದಿಕ್ಕಿನಲ್ಲಿ ತಿರುಮಲಾಚಾರ್ಯರ ಕೊಳದ ವಾಯವ್ಯ ಮತ್ತು ಈಶಾನ್ಯ ಮೂಲೆಗಳಲ್ಲಿ

ಮೇಲಿನ ೬೪ನೇ ನಂಬರ್‌ನಂತೆಯೇ ನಾಗರಾಕ್ಷರದಲ್ಲಿ ಬರೆಯಲ್ಪಟ್ಟಿವೆ

**ವಿವರಣೆ—** ಹಿಂದಣ ನಂಬರ್ 63 ಶಾಸನದಂತೆಯೇ.

## ಮದ್ರಾಸ್ ತಿರುವಲ್ಲಿಕ್ಕೇಣಿಯಲ್ಲಿ

ಶಾಸನ ಕಾಲವು ಕ್ರಿ. ಶ. 1816

ಪ್ರಸಿದ್ಧರಾದ ಪ್ರಧಾನ್ ತಿರುಮಲರಾಯರು ಕ್ರಿ. ಶ. 1815ರಲ್ಲಿ ಪರಮಪದಿಸಿದರು. ತಿರುವಲ್ಲಿಕ್ಕೇಣಿಯಲ್ಲಿ ಶ್ರೀ ಪಾರ್ಥಸಾರಥಿ ಸ್ವಾಮಿಯವರ ದೇವಸ್ಥಾನದ ಪೂರ್ವದಿಕ್ಕಿನ ಎಲ್ಲೆಯಲ್ಲಿ ದೇವಸ್ಥಾನಕ್ಕೆ ಸುಮಾರಾಗಿ ನೇರವಾಗಿ ಪೂರ್ವ ಸಮುದ್ರತೀರದಲ್ಲಿ ಈಗ ಸುಂಕುವಾರ್ ಬೀದಿ ಎಂದು ಹೆಸರಿರುವ ಬೀದಿಯ ಕೊನೆಯಲ್ಲಿ ಶ್ರೀ ತಿರುಮಲರಾಯರ ಕಳೇಬರವು ದಹನ ಮಾಡಲ್ಪಟ್ಟಿತು. ಆ ಸಮಯದಲ್ಲಿ ತಿರುವಲ್ಲಿಕ್ಕೇಣಿಯಲ್ಲಿದ್ದ ನಮ್ಮ ಸಮುದಾಯದ ಮತ್ತು ಇತರ ಶ್ರೀವೈಷ್ಣವ ಸಮುದಾಯಗಳ ನೂರಾರು ಮಹಾಜನಗಳು ನೆರೆದಿದ್ದರು. ಬ್ರಿಟಿಷ್ ರಾಜರ ಪ್ರತಿನಿಧಿಗಳೂ ಅಂತ್ಯ ಗೌರವವನ್ನು ಸಲ್ಲಿಸಿದರು. ನಮ್ಮ ಸಮುದಾಯದವರು ಅವರ ಸ್ಮರಣಾರ್ಥವಾಗಿ ಈ ಸ್ಥಳದಲ್ಲಿ ಒಂದು ಬೃಂದಾವನವನ್ನೂ ಮಂಟಪವನ್ನೂ ಸಾಮೂಹಿಕವಾಗಿ ಕಟ್ಟಿಸಿ, ಅಲ್ಲಿ ಒಂದು ತೋಟವನ್ನು ನಿರ್ಮಾಣ ಮಾಡಿ, ನಮ್ಮ ಸಮುದಾಯದವರೆಲ್ಲರ ಒಟ್ಟಿನ ಸ್ವತ್ತಾಗಿ ಬಿಟ್ಟರುವರೆಂದು ನಮ್ಮ ಹಿರಿಯರು ಹೇಳುತ್ತ ಬಂದಿರುವರು. ಮಂಟಪದಲ್ಲಿ ಕೆಳಗೆ ಕಂಡಂತೆ ಶಾಸನವಿದೆ:—

| | |
|---|---|
| ಧಾತು ವರ್ಷಂ<br>ವೈಯಾಶಿ ೨<br>ತಿರುಮಲೈ ಅನಂದಾಂ ಪಿಳ್ಳೆ<br>ತಿರುಮಲಾಚಾರ್ಯರ್ ಅವರ್‌ಹಳ್ | } ತಮಿಳು ಅಕ್ಷರದಲ್ಲಿ |
| ತಿರುಮಲೈ ಆನಂದಾಂಪಿಳ್ಳೆ<br>ತಿರುಮಲಾಚಾರ್ | } ತೆಲುಗು ಅಕ್ಷರದಲ್ಲಿ |
| ಶಿರಂಗಪಟ್ಟಣ | (ತಮಿಳು ಲಿಪಿ) |

# ಪರಿಶಿಷ್ಟ ii

## ಮಂಡಯಂ ಮಹಾಜನಗಳ ಹೆಸರುಗಳ ಪಟ್ಟಿ

ಸೂಚನೆ: ಹೆಸರುಗಳನ್ನು ಓದುವಾಗ ಶ್ರೀಮಾನ್ ಅಥವ ಶ್ರೀಮತಿ ಎನ್ನುವುದನ್ನು ಸೇರಿಸಿಕೊಂಡು ಓದಬೇಕಾಗಿ ಪ್ರಾರ್ಥನೆ.

### ಮದ್ರಾಸ್

1 ಡಾಕ್ಟರ್ M. O. ಪಾರ್ಥಸಾರಥಿ ಅಯ್ಯಂಗಾರ್ (ಆಸೂರಿ)
2 M. O. ಅಳಶಿಂಗ್ರಾಚಾರಿ ,,
3 M. O. ಕೃಷ್ಣಸ್ವಾಮಿ ,,
4 M. O. ಶ್ರೀನಿವಾಸನ್ ,,
5 M. O. ಸುಂದರರಾಜನ್ ,,
6 M. O. ಅಳಶಿಂಗ್ರಾಚಾರಿ
(M. O. ತಿರುಮಲಾಚಾರ್ಯರ ಮಕ್ಕಳು) ,,
7 M. O. ಪಾರ್ಥಸಾರಥಿ ,, ,,
8 M. G. ಶ್ರೀನಿವಾಸನ್ (ಗೋಮಠಂ)
9 M. C. ರಾಮಾನುಜಯ್ಯಂಗಾರ್ (ಚೆನ್ನ)
10 M. A. ರಾಜಗೋಪಾಲನ್ } ಎಂ. ಎ. ರಾಮಾನುಜಂರವರ
11 M. A. ಶ್ರೀನಿವಾಸನ್ } ಮಕ್ಕಳು
12 R. A. ನಾರಾಯಣನ್ (ಹೊಂದಲಗೆರೆ)
13 M. C. ನರಸಿಂಹಾಚಾರ್ (ಕೋಪೆ)
14 M. M. ಪಾರ್ಥಸಾರಥಿ (ಶಡಗೋಪನ್)
15 M. K. ಕೃಷ್ಣಮಾಚಾರಿ
16 R. A. ಕೃಷ್ಣಯ್ಯಂಗಾರ್ (ಅಮ್ಮಾಂಜಿ

| | | |
|---|---|---|
| 17 | R. A. ರಾಜಗೋಪಾಲನ್ | (ಆಮ್ಮಾಂಜಿ) |
| 18 | M. C. ತಿರುಮಶ್ಶೈ | (ಕೋಯಿಲ್‌ವಾಶಲ್) |
| 19 | M. R. ಸಂಪತ್ಕುಮಾರನ್ | (ಮಳೂರು) |
| 20 | M. C. ನರಸಿಂಹಾಚಾರ್ಯ | (ಬ್ರಹ್ಮವಾದಿನ್) |
| 21 | M. C. ಶ್ರೀನಿವಾಸಾಚಾರಿ | ,, |
| 22 | M. C. ಕೃಷ್ಣನ್ | ,, |
| 23 | M. ನರಸಿಂಹನ್ | (ಮಳೂರು) |
| 24 | M. D. ಪಾರ್ಥಸಾರಥಿ | (ದೇವಶಿಖಾಮಣಿ) |
| 25 | M. D. ನರಸಿಂಹನ್ | ,, |
| 26 | M. C. ಪಾರ್ಥಸಾರಥಿ | (ಪರಮೇಕಾಂತಿ) |
| 27 | M. A. ಕೃಷ್ಣಮೂರ್ತಿ<br>(ಪೆರಿಹಾತ್ ಶ್ರೀನಿವಾಸಯ್ಯಂಗಾರ್ರ ಮಕ್ಕಳು) | |
| 28 | M. A. ಶ್ರೀನಿವಾಸನ್ | (ಆಚಿ) |
| 29 | M. A. ಪಾರ್ಥಸಾರಥಿ | (ಭವಾನಿ) |
| 30 | R. A. ಶ್ರೀರಂಗರಾಜನ್ | |
| 31 | R. A. ಶ್ರೀನಿವಾಸನ್ | |
| 32 | R. A. ನರಸಿಂಹನ್ | |
| 33 | S. T. ಶಿಂಗ್ರಾಚಾರಿ | (ಪುದುಚೇರಿ) |
| 34 | M. D. ಶ್ರೀನಿವಾಸನ್ | (ಧಾಟಿ) |
| 35 | S. N. ಶ್ರೀನಿವಾಸನ್ | (ಶಾಮರಾಯರ್) |
| 36 | M. N. ರಾಮಾನುಜನ್ | (ನಾಯಕರ್) |
| 37 | M. N. ಪಾರ್ಥಸಾರಥಿ | ,, |
| 38 | M. N. ಕೃಷ್ಣಸ್ವಾಮಿ | ,, |
| 39 | M. A. ನರಸಿಂಹನ್ | (ಅಣ್ಣಾಧೊರೆ) |

40 M. R. ಅಳಶಿಂಗ್ರಾಚಾರ್
(ಎಂ. ಎ. ರಾಮಾನುಜಂ ಮಕ್ಕಳು)

41 M. C. ನರಸಿಂಹಾಚಾರ್ (ಚೊಕ್ಕಮಾಮನ್)

42 M. N. ನರಸಿಂಹಾಚಾರ್ (ಶಾಮಾ ಫೊಟ್ಟೈ)

43 M. A. ರಾಜಗೋಪಾಲಯ್ಯಂಗಾರ್ (ಅಧ್ಯಾಪಕರ್)

44 S. ಅನಂದಾಳ್ವಾರ್ (ಕಾಯಿಬಜ್ಜಿ)

45 M. B. ಶೆಲ್ವನಾರಾಯಣನ್ (ಭೂಲೋಕಂ)

46 M. K. ನರಸಿಂಹನ್ (ಕೋಪಿ)

47 M. A. ಕೃಷ್ಣಮಾಚಾರಿ
(ಕ್ಯಾಷ್ ಕೀಪರ್ ಪಾರ್ಥಸಾರಥಿ ಅಯ್ಯಂಗಾರ್ರ ಮಕ್ಕಳು)

48 M. A. ಶಿಂಗ್ರಾಚಾರ್
(ಅಡ್ವೊಕೇಟ್ ತಿರುನಾರಾಯಣಾಚಾರ್ಯರ ಮಕ್ಕಳು)

49 M. A. ಪಾರ್ಥಸಾರಥಿ ,,

50 M. A. ರಾಜಗೋಪಾಲನ್ ,,

51 M. A. ರಂಗಸ್ವಾಮಿ ,,

52 M. A. ಕೃಷ್ಣಸ್ವಾಮಿ ,,

53 H. R. ಅಳಶಿಂಗ್ರಾಚಾರ್ (ಹೊನ್ನಳಗೆರೆ)

54 ಡಾಕ್ಟರ್ S. T. ನರಸಿಂಹನ್

55 R. A. ನಾರಾಯಣ ಅಯ್ಯಂಗಾರ್ (ರಾಮಾನುಜಪುರಂ)

56 M. C. ವೆಂಕಟಾಚಾರ್ (ಕುಪೂರ್)

57 M. C. ಶ್ರೀನಿವಾಸನ್ ,,

58 M. C. ಶ್ರೀನಿವಾಸನ್ ,,

59 M. B. ಶಾಮಯ್ಯಂಗಾರ್ (ಭಾರತಿ)

60 T. A. ನರಸಿಂಹನ್ (ಟಿಪ್ಪಣಿ)

61 M. N. ಶ್ರೀನಿವಾಸನ್ (ನಾಯಕರ್)
62 M. V. ಶ್ರೀರಂಗರಾಜನ್ (ವೀರಾಂಬುಧಿ)
63 M. A. ತಿರುಮಲಾಚಾರಿ ,,
64 M. A. ಶೇಷಾದ್ರಿ ,,
65 M. D. ಪಾರ್ಥಸಾರಥಿ, ಸಂಗೀತಭೂಷಣ
66 M. D. ಗೋಪಾಲಾಚಾರ್ (ಧಾಟಿ)
67 M. N. ಅಳಶಿಂಗ್ರಾಚಾರ್ (ಅಚ್ಚಪ್ಪನ್)
68 M. T. ರಾಮಾನುಜಂ (ಕಲ್ಪಿ)
69 M. C. ಮಣವಾಳ ಅಯ್ಯಂಗಾರ್
70 M. C. ಶ್ರೀನಿವಾಸನ್ (ಮೇಲಿನವರ ಮಕ್ಕಳು)
71 M. K. ಕುಮಾರ್
72 Y. G. ಧೊರೆಸ್ವಾಮಿ (ಯಜ್ಞಾನ್ ಗುಂಜ)
73 Y. G. ಪಾರ್ಥಸಾರಥಿ ,,
74 Y. G. ರಾಮಾನುಜಂ ,,
75 M. A. ಪಾರ್ಥಸಾರಥಿ (ಎಂ. ಎ. ಶ್ರೀನಿವಾಸರವರ ಮಕ್ಕಳು)
76 M. V. ರಾಧಾಕೃಷ್ಣನ್
77 M. T. ವೇಂಗಡಮ್ಮ (ತೊಂಡನೂರು)
78 M. M. C. ಅಲಮೇಲಮ್ಮ
79 M. O. ಅಲಮೇಲಮ್ಮ

## ಮೈಸೂರು

1 M. J. ಸಂಪತ್ಕುಮಾರಾಚಾರ್ಯ (ಜಯರಾಂ)
2 M. J. ನರಸಿಂಹನ್ ,,
3 R. A. ಸಂಪತ್ಕುಮಾರಾಚಾರ್ಯ (ಅರಕೆರೆ)

4 R. A. ಕೃಷ್ಣಸ್ವಾಮಿ (ಅರಕೆರೆ)
5 M. ಧೊರೆಸ್ವಾಮಿ ಅಯ್ಯಂಗಾರ್ (ಮಾತ್ರೆ)
6 M. A. ಕೃಷ್ಣಸ್ವಾಮಿ ಅಯ್ಯಂಗಾರ್ (ಅಣ್ಣಾಧೊರೆ)
7 M. A. ನರಸಿಂಹಾಚಾರ್, ಶ್ಯಾಮಸುಂದರ್ ,,
8 K. ನರಸಿಂಹಾಚಾರ್ (ಕರೋಹಟ್ಟಿ)
9 N. ವೆಂಕಟಾಚಾರ್ (ನಾಟಂಪಳ್ಳಿ)
10 ಡಾ|| R. S. ಅಯ್ಯಂಗಾರ್ (ಅರಕೆರೆ)
11 R. A. ನರಸಿಂಹಾಚಾರ್ ,,
12 R. A. ಕೃಷ್ಣಯ್ಯಂಗಾರ್ ,,
13 M. D. ನರಸಿಂಹಯ್ಯಂಗಾರ್ (ಧಾಟಿ)
14 M. I ಶ್ರೀನಿವಾಸನ್ (ಐಶಾಮಿ)
15 M. ನಾರಾಯಣನ್ (ಮಣಿಕರ್ಣಿಕೆ)
16 ಡಾ|| M. D. ನರಸಿಂಹನ್ (ಧಾಟಿ)
17 M. G. ರಾಜಮನ್ನಾರ್ (ಗೋವಿಂದಪ್ಪಂಗಾರ್)
18 M. C. ರಾಜಮನ್ನಾರ್ (ಛತ್ರಪತಿ)
19 N. ಪಾರ್ಥಸಾರಥಿ (ನಾಯಕರ್)
20 H. R. ರಂಗಸ್ವಾಮಿ ಅಯ್ಯಂಗಾರ್ (ಹೊನ್ನಲಗೆರೆ)
21 M. P. ಅಪ್ಪಲಾಚಾರ್ (ಪೆರಮೇಕಾಂತಿ)
22 M. C. ಕುಮಾರ್ (ಚೊಕ್ಕಮಾಮನ್)
23 M. N. ಗೋವಿಂದಯ್ಯಂಗಾರ್
24 M. N. ಕೃಷ್ಣಯ್ಯಂಗಾರ್ (ಮಿನ್ನಾಣಿ)
25 M. N. ಶ್ರೀನಿವಾಸನ್ ,,
26 M. C. ಶಿಂಗ್ಲಾಚಾರ್ (ಚಿಂತಾಮಣಿ)

